ಕನ್ನಡ ವಿಶ್ವವಿದ್ಯಾಲಯ

# ಎಚ್.ಎಲ್.ನಾಗೇಗೌಡರ ಕಾದಂಬರಿಗಳು : ಒಂದು ಅಧ್ಯಯನ

೨೦೧೧-೨೦೧೨ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ.

ಮಾರ್ಗದರ್ಶಕರು

ಡಾ. ಮದನಕುಮಾರ ಎ.ಅರ್
ಸಹಪ್ರಾದ್ಯಾಪಕರು
ಮಹಿಳಾ ಪ್ರಥಮದರ್ಜೆಕಾಲೇಜು
ಮಂಡ್ಯ

ಸಂಶೋಧಕ

ಯೋಗೀಶ.ಸಿ.ಎಂ
ಕನ್ನಡ ಎಂ.ಫಿಲ್.ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ ಹಂಪಿ
ಕರ್ನಾಟಕ ಸಂಘ (ರಿ), ಮಂಡ್ಯ



೨೦೧೧-೧೨ನೇ ಸಾಲು
ಕನ್ನಡ ವಿಶ್ವವಿದ್ಯಾಲಯ ಹಂಪಿ

975

ಕನ್ನಡ ವಿಶ್ವವಿದ್ಯಾಲಯ

# ಎಚ್.ಎಲ್.ನಾಗೇಗೌಡರ ಕಾದಂಬರಿಗಳು : ಒಂದು ಅಧ್ಯಯನ

೨೦೧೧-೨೦೧೨ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ.

ಮಾರ್ಗದರ್ಶಕರು

ಡಾ. ಮದನಕುಮಾರ ಎ.ಅರ್
ಸಹಪ್ರಾದ್ಯಾಪಕರು
ಮಹಿಳಾ ಪ್ರಥಮದರ್ಜೆಕಾಲೇಜು
ಮಂಡ್ಯ

ಸಂಶೋಧಕ

ಯೋಗೀಶ.ಸಿ.ಎಂ
ಕನ್ನಡ ಎಂ.ಫಿಲ್.ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ ಹಂಪಿ
ಕರ್ನಾಟಕ ಸಂಘ (ರಿ), ಮಂಡ್ಯ

೨೦೧೧-೧೨ನೇ ಸಾಲು
ಕನ್ನಡ ವಿಶ್ವವಿದ್ಯಾಲಯ ಹಂಪಿ

# ದೃಢೀಕರಣ ಪತ್ರ

೨೦೧೧-೧೨ನೇ ಸಾಲಿನಲ್ಲಿ ಯೋಗೀಶ ಸಿ.ಎಂ ಎಂಬ 'ಎಂ.ಫಿಲ್. ವಿದ್ಯಾರ್ಥಿಯು ಈ ಪರೀಕ್ಷೆಯ ಅಂಗವಾಗಿ **ಎಚ್.ಎಲ್.ನಾಗೇಗೌಡರ ಕಾದಂಬರಿಗಳು : ಒಂದು ಅಧ್ಯಯನ'** ಎಂಬ ವಿಷಯ ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೋಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲ ಎಂದು ಧೃಢೀಕರಿಸುತ್ತೇನೆ.

ಸ್ಥಳ-ಮಂಡ್ಯ

ಸಹಿ/

ಡಾ. ಮದನಕುಮಾರ ಎ.ಅರ್.
ಸಹಪ್ರಾಧ್ಯಾಪಕರು.
ಮಹಿಳಾ ಪ್ರಥಮದರ್ಜೆಕಾಲೇಜು
ಮಂಡ್ಯ

# ಪ್ರಮಾಣ ಪತ್ರ

**"ಎಚ್.ಎಲ್.ನಾಗೇಗೌಡರ ಕಾದಂಬರಿಗಳು : ಒಂದು ಅಧ್ಯಯನ"** ಎಂಬ ವಿಷಯದ ಸಂಶೋಧನ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮಸಂಖ್ಯೆ KRSMKS-00555 ವಿದ್ಯಾರ್ಥಿಯಾದ ನಾನು ೨೦೧೧-೧೨ನೇ ಸಾಲಿನ ಪರೀಕ್ಷೆಗಾಗಿ ಡಾ. ಮದನಕುಮಾರ ಎ. ಅರ್. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ನಿಬಂಧವನ್ನು ಯಾವುದೇ ಬಗೆಯ ಪದವಿ, ಡಿಪ್ಲೋಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ :- ಮಂಡ್ಯ

(ಯೋಗೀಶ.ಸಿ.ಎಂ)

೨೦೧೧-೧೨ನೇ ಸಾಲಿನ
ಎಂ.ಫಿಲ್.ವಿದ್ಯಾರ್ಥಿ
ಕರ್ನಾಟಕ ಸಂಘ (ರಿ)
ಮಂಡ್ಯ.

# ಪರಿವಿಡಿ

## ಎಚ್.ಎಲ್.ನಾಗೇಗೌಡರ ಕಾದಂಬರಿಗಳು : ಒಂದು ಅಧ್ಯಯನ

ಪುಟ ಸಂಖ್ಯೆ

# ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ:–

ದಕ್ಷ ಆಡಳಿತಗಾರರಾಗಿದ್ದುಕೊಂಡು ಬಿಡುವಿಲ್ಲದ ಸೇವೆಯನ್ನು ಸಮರ್ಪಕವಾಗಿ ಮಾಡುತ್ತಾ ಬಿಡುವು ದೊರೆತಾಗಲೆಲ್ಲ ಸಾಹಿತ್ಯದ ಅಭ್ಯಾಸ, ಚಿಂತನೆ, ರಚನೆಗೆ ಚಿತ್ತಹರಿಸಿ ಸಾಹಿತ್ಯಕ್ಷೇತ್ರದಲ್ಲಿ ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿದ ಅಪರೂಪದ ವ್ಯಕ್ತಿ ಎಚ್. ಎಲ್. ನಾಗೇಗೌಡ. ಭಾಷಾಂತರದಿಂದ ಆರಂಭಿಸಿ ಕ್ರಿಯಾತ್ಮಕ ಸಾಹಿತ್ಯ ಸೃಷ್ಟಿಯವರೆಗೂ ಇರುವ ಇವರ ಸಾಹಿತ್ಯ ಕೃಷಿ ವಿಸ್ತಾರವಾಗಿದೆ. ಜನಪದ ಸಾಹಿತ್ಯಕ್ಕೆ ಇವರು ಸಲ್ಲಿಸಿರುವ ಸೇವೆ ಅವಿಸ್ಮರಣೀಯ.

ಸರ್ಕಾರಿ ಉದ್ಯೋಗದಲ್ಲಿದ್ದರೂ, ವಿಜ್ಞಾನ ಮತ್ತು ನ್ಯಾಯಶಾಸ್ತ್ರಗಳನ್ನು ಕಲಿತಿದ್ದರೂ, ನಾಗೇಗೌಡರಿಗೆ ಸಾಹಿತ್ಯ ಮತ್ತು ಜಾನಪದ ಕ್ಷೇತ್ರದಲ್ಲಿ ಅಪಾರ ಆಸಕ್ತಿ ಇತ್ತು. ಅಸಾಧಾರಣ ಅಭಿವ್ಯಕ್ತಿಯನ್ನು ಗಳಿಸಿದ್ದ ಇವರು ಕನ್ನಡ ಸಾಹಿತ್ಯ ಮತ್ತು ಜಾನಪದದ ಏಳಿಗೆಗೆ ಅಪಾರವಾಗಿ ಶ್ರಮಿಸಿದರು. ಉತ್ತಮ ಮೌಲ್ಯಗಳನ್ನು ಬದುಕಿನುದ್ದಕ್ಕೂ ರೂಢಿಸಿಕೊಂಡು ಆ ಮೌಲ್ಯಗಳನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಬಿತ್ತರಿಸಿದ ಗ್ರಾಮೀಣ ಸಂವೇದನೆಯ ಬುದ್ಧಿವಂತ ಪ್ರತಿಭೆ ಹೆಚ್.ಎಲ್.ನಾಗೇಗೌಡರು. ನಗರದಲ್ಲಿ ಹುಟ್ಟಿ ಬೆಳೆದವರಿಗೆ ದಕ್ಕದ ಅನುಭವ ವೈಶಾಲ್ಯ ಇವರಿಗೆ ವಶವಾಗಿದ್ದು ಈ ಅನುಭವ ಭಾವದೀಪ್ತವಾಗಿ ಪ್ರತಿಭಾಗ್ನಿಯಲ್ಲಿ ಮಿಂದು ಸಾಹಿತ್ಯ ರೂಪದಲ್ಲಿ ಹೊರಹೊಮ್ಮಿದೆ ಎಂದು ಹೇಳಬಹುದು.

ನಾಗೇಗೌಡರು ಸಾಹಿತ್ಯ ಕ್ಷೇತ್ರದಲ್ಲಿ ಕೈಗೊಂಡ ಸಾಧನೆಗಳು ಹಲವು ತೆರೆನಾದವು. ನಾಗೇಗೌಡರು ಭಾರತೀಯ ಜಾನಪದ ಕ್ಷೇತ್ರದಲ್ಲಿ ಅಗ್ರಪಂಕ್ತಿಯಲ್ಲಿ ನಿಲ್ಲುತ್ತಾರೆ. ಜನಪದ ಸಾಹಿತ್ಯದ ಅಪಾರ ಒಲವಿನಿಂದ ಆ ಸಾಹಿತ್ಯಿಕ ಸಂರಕ್ಷಣೆಯ ಬಗೆಗೆ ಅಪರಿಮಿತ ಉತ್ಸಾಹ ಹಾಗೂ ಮುತುವರ್ಜಿಯನ್ನು ವಹಿಸಿದ್ದಾರೆ.

ಸಾಹಿತ್ಯ ಮತ್ತು ಜಗತ್ತಿನ ಜ್ಞಾನದ ವಿಧಾನಗಳನ್ನು ಅಭ್ಯಾಸ ಮಾಡಿದ್ದರ ಪರಿಣಾಮ ನಾಗೇಗೌಡರು ಅಪಾರ ತಿಳುವಳಿಕೆಯನ್ನು ಗ್ರಹಿಸಿದ್ದಾರೆ. ಈ ತಿಳುವಳಿಕೆಯೇ ಅವರ ಬದುಕಿನ ಗತಿಯನ್ನೇ ಬದಲಾಯಿಸಿದೆ, ಮನುಷ್ಯತ್ವಕ್ಕೆ ಮಿಡಿಯುವ ಸೂಕ್ಷ್ಮ ಹೃದಯ, ಕಷ್ಟಕ್ಕೆ ಕರಗುವ ಅಂತಃಕರಣ, ಗ್ರಾಮೀಣ ಸಂಸ್ಕೃತಿಯ ಬಗೆಗಿನ ಅತೀವವಾದ ಪ್ರೀತಿ, ಈ ಮೂರು ಗುಣಗಳು ನಾಗೇಗೌಡರನ್ನು ಶ್ರೇಷ್ಠ ಬರಹಗಾರರನ್ನಾಗಿ ರೂಪಿಸಿವೆ.

ಎಚ್.ಎಲ್. ನಾಗೇಗೌಡರು 'ನಾನಾಗುವೆ ಗೀಜುಗನ ಹಕ್ಕಿ' ಕವನ ಸಂಕಲನದಿಂದ ಪ್ರಾರಂಭಗೊಂಡು 'ಕನ್ನಡ ಜಾನಪದ ಕೋಶ' ಕೃತಿಯವರೆಗೂ ಸುಮಾರು ೪೫ ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳಲಿ

ಅವರ ಜೀವನಾನುಭವ ಸಹಜವಾಗಿ, ಸರಾಗವಾಗಿ ಬಿತ್ತರ ಗೊಂಡಿದೆ.

ನಾಗೇಗೌಡರು ಗ್ರಾಮೀಣ ಸಂಸ್ಕೃತಿ ಬಗ್ಗೆ ಅತೀವ ಪ್ರೀತಿ ಹೊಂದಿದ್ದರು. ಗ್ರಾಮೀಣ ಮುಗ್ಧತೆ, ಕುತೂಹಲ, ಸರಳತೆ, ಅದಮ್ಯ ಜೀವನ ಪ್ರೀತಿಗಳು ಗೌಡರ ಕಾದಂಬರಿಗಳ ಮೂಲ ದ್ರವ್ಯವಾಗಿದ್ದು ಅವರ 'ದೊಡ್ಡಮನೆ', 'ಸೊನ್ನೆಯಿಂದ ಸೊನ್ನೆಗೆ', 'ಭೂಮಿಗೆ ಬಂದ ಗಾಂಧರ್ವ' ಕಾದಂಬರಿಗಳಲ್ಲಿ ಬಿತ್ತರಗೊಂಡಿವೆ. ತಾನು ಹುಟ್ಟಿ ಬೆಳೆದ ಮಣ್ಣಿನ ಬದುಕಿನ ವಿಸ್ತಾರ ಲೋಕದ ಚಿತ್ರಗಳನ್ನು ಕೊಡುವಲ್ಲಿ ಇವರು ಸಿದ್ಧಹಸ್ತರು.

ನಾಗೇಗೌಡರ ಎಲ್ಲಾ ಕಾದಂಬರಿಗಳಲ್ಲೂ ಸಾಮಾನ್ಯವಾಗಿ ಕಂಡುಬರುವ ಅಂಶವೆಂದರೆ ಜಾನಪದ ಪ್ರತಿಭೆಯ ತತ್ವ ಸೊಗಡು, ಹಾಗಾಗಿ ನಾಗೇಗೌಡರು ಎಂದರೆ ಜಾನಪದ ಎನ್ನುವಂತಾಗಿದೆ. ಇಂತಹ ಜಾನಪದ ಇವರ ಕಾದಂಬರಿಗಳಲ್ಲಿ ವಿಶಾಲವಾದ ಅರ್ಥದಲ್ಲಿ ಬಳಕೆಯಾಗಿದ್ದು, ಒಂದು ಸಮುದಾಯದ ಆಚಾರ-ವಿಚಾರ, ಕ್ರೀಡೆ, ನೃತ್ಯ, ನಾಟಕ, ಅಡುಗೆ, ಉಡುಗೆ-ತೊಡುಗೆ, ವೈದ್ಯ, ಧಾರ್ಮಿಕ ಕ್ರಿಯೆಗಳು ಮೊದಲಾದ ಜೀವನ ವಿಧಾನಗಳನ್ನು ಒಳಗೊಳ್ಳುತ್ತದೆ. "ಜಾನಪದ ಸಾಮಾಗ್ರಿಯಲ್ಲಿ ಜನಾಂಗದ ಸಂಪೂರ್ಣ ಜೀವನ ವಿಧಾನವೇ ಸಂಗ್ರಹವಾಗಿದೆ. ಈ ಸಂಗ್ರಹವನ್ನು ಮತ್ತೆ ಸಂಗ್ರಹಿಸಿ ಅದನ್ನು ತಿಳಿದುಕೊಳ್ಳಬೇಕಾಗಿರುವುದೇ ಈಗಿನ ಕೆಲಸ"[೧] ಎಂಬ ಉಕ್ತಿ ಜಾನಪದೀಯ ಅಧ್ಯಾಯನದ ವೈಶಿಷ್ಟ್ಯ ತಿಳಿಸುತ್ತದೆ. ಆದ್ದರಿಂದ ನಾಗೇಗೌಡರ ಕಾದಂಬರಿಗಳ ಜಾನಪದೀಯ ಅಂಶಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ.

ಈ ಅಧ್ಯಯನದಲ್ಲಿ ನಾಗೇಗೌಡರ ಕಾದಂಬರಿಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದ್ದು, ಕಾದಂಬರಿ ಹಿನ್ನೆಲೆ, ಉಗಮ, ನಡೆ, ನಾಗೇಗೌಡರ ಜೀವನ, ವ್ಯಕ್ತಿತ್ವ, ಸಾಹಿತ್ಯದ ಸಾಧನೆ, ಕಾದಂಬರಿ ಪ್ರಕಾರದಲ್ಲಿ ಅವರ ಸಾಧನೆ ಇವೇ ಮೊದಲಾದ ವಿಷಯಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ಅಳವಡಿಸಲಾಗಿದೆ.

ಈ ನನ್ನ ಪ್ರಬಂಧದಲ್ಲಿ ನಾಗೇಗೌಡರ ಕಾದಂಬರಿಗಳ ಸಮಗ್ರ ವಿಶ್ಲೇಷಣೆ ನಡೆಸಲಾಗಿದೆ. ಅವರ ಕಾದಂಬರಿಗಳು ಕೇಳಿದ ನೋಡಿದ ಅನುಭವಗಳ ಸಾರಸಂಗ್ರಹಗಳಾಗಿವೆ. ತಾವು ಅನುಭವಿಸಿದಅನುಭವಗಳನ್ನು, ಅನುಭವಿಸದ, ಅನುಭವಿಸಲಾರದ ಸಹೃದಯರಿಗೆ ತಮ್ಮ ಕಾದಂಬರಿಗಳಲ್ಲಿ ಗ್ರಾಮೀಣ ಸಮಾಜದ ಸಮಗ್ರ ಚಿತ್ರಣವನ್ನು ನೀಡುತ್ತಾರೆ. ಅದರಲ್ಲೂ ಇವರ ಕಾದಂಬರಿಗಳು ಈಗಾಗಲೇ ಮರೆತು ಹೋಗುತ್ತಿರುವ, ಕಣ್ಮರೆಯಾಗುತ್ತಿರುವ ಬಯಲು ಸೀಮೆಯ ಜನಜೀವನ ಚಿತ್ರಣವನ್ನು ನೀಡುತ್ತವೆ. ಆದ್ದರಿಂದ ಇವರ ಕಾದಂಬರಿಗಳು ಅಧ್ಯಾಯನ ಯೋಗ್ಯವೆನಿಸಿವೆ. ಈ ಕಾರಣದಿಂದ ನಾಗೇಗೌಡರ ಕಾದಂಬರಿಗಳ ಸೊಗಡೇ ವಿಶಿಷ್ಟವಾದುದು. ಅದರ ಅನನ್ಯತೆ ಒಂದು ಸಂಶೋಧನಾರ್ಹ ವಿಷಯವೆಂಬುದರಲ್ಲಿ ಅನುಮಾನವಿಲ್ಲ.

---

೧ - ಹಾ.ಮಾ.ನಾಯಕ, ಜಾನಪದ ಸ್ವರೂಪ. ೧೯೭೧.ಪು.೩೦.

ಈ ನಿಬಂಧದಲ್ಲಿ ಹೆಚ್.ಎಲ್.ನಾಗೇಗೌಡರ ಕಾದಂಬರಿಗಳ ವಸ್ತುವಿಶ್ಲೇಷಣೆ ಮಾಡಲಾಗಿದ್ದು. ಕಾದಂಬರಿಯಲ್ಲಿ ಬರುವ ಪಾತ್ರ ಚಿತ್ರಣ, ಜಾನಪದೀಯ ಅಂಶಗಳು, ಜೀವನ ವಿಧಾನ, ಭಾಷೆ-ಶೈಲಿ, ಹೀಗೆ ವಿವಿಧ ಅಂಶಗಳಾಗಿ ವಿಭಜಿಸಿಕೊಂಡು ಅಧ್ಯಯನ ನಡೆಸಲಾಗಿದೆ. ಇದು ಕಳೆದುಹೋದ ಸಂಸ್ಕೃತಿಯ ಅಧ್ಯಯನವೂ ಆಗಿದೆ. ಮಾನವೀಯ ಮೌಲ್ಯಗಳನ್ನು ಅರಿಯಲು, ಸಮಾಜದ ಬಗ್ಗೆ ತಿಳಿಯಲು, ಜನಾಂಗದ ಬದುಕನ್ನು ಅರ್ಥಮಾಡಿಕೊಳ್ಳಲು ಈ ಅಧ್ಯಯನ ನೆರವಾಗುತ್ತದೆ.

# ಅಧ್ಯಾಯ – ೨

## ಕಾದಂಬರಿ ಹಿನ್ನೆಲೆ, ಉಗಮ, ಸ್ವರೂಪ:-

**ಹಿನ್ನೆಲೆ;-**

ಅಧುನಿಕ ಕನ್ನಡ ಸಾಹಿತ್ಯದಲ್ಲಿ ಕಾದಂಬರಿ ಸಾಹಿತ್ಯವು ಜನಪ್ರಿಯವಾದ ಪ್ರಕಾರವಾಗಿದೆ. ಕಾದಂಬರಿಗಳು ಕೇವಲ ಮನರಂಜನೆಯ ಸಾದನೆಗಳಾಗಿರದೆ ಬದುಕಿನ ಮಹಾಕಾವ್ಯಗಳೆನಿಸಿವೆ. ಮನುಷ್ಯನ ಬದುಕಿನ ರಹಸ್ಯವನ್ನು ಬಿಡಿಸಿ ತೋರಿಸುವ ಸಾಹಿತ್ಯ ಪ್ರಕಾರವಾಗಿದೆ. ಇದು ಜನಪದ ಸಾಹಿತ್ಯದಂತೆ ಸಾಮಾನ್ಯ ಜನರ ಅಶೋತ್ತರಗಳನ್ನು, ಅಭಿರುಚಿಗಳನ್ನು, ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಪ್ರತಿಬಿಂಬಿಸುವ ಮಾಧ್ಯಮವಾಗಿದೆ. ಕಾದಂಬರಿ ಸಮಕಾಲೀನ ಜೀವನಕ್ಕೆ ತೀರ ಯೋಗ್ಯವಾದ ರೂಪವಾಗಿದ್ದು, ಕರತಲ ರಂಗಭೂಮಿ ಎಂದೇ ಪ್ರಸಿದ್ಧಿ ಪಡೆದಿದೆ.

ಸುಮಾರು ೫ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಕರ್ನಾಟಕದಲ್ಲಿ ಹರಡಿಕೊಂಡಿರುವ ಶಾಸನಗಳಲ್ಲಿ ಅನೇಕವು ಗದ್ಯ ಶಾಸನಗಳಾಗಿವೆ. "ಕದಂಬರ ಕಾಲಕ್ಕೆ ಸೇರಿದ ಹಲ್ಮಿಡಿ ಶಾಸನ (ಕ್ರಿ.ಶ.೪೫೦) ಪೂರ್ವದಹಳಗನ್ನಡ ಭಾಷೆಯಲ್ಲಿದೆ. ಮುಂದೆ ೭ನೆಯ ಶತಮಾನದಿಂದ ೯ನೇ ಶತಮಾನದವರೆಗಿನ ಶಾಸನಗಳಲ್ಲಿ ಹಳಗನ್ನಡ ಶಬ್ಧಗಳನ್ನು ವಿಶೇಷವಾಗಿ ಕಾಣುತ್ತೇವೆ. ೧೦ನೇ ಶತಮಾನದ ಹೊತ್ತಿಗೆ ಕನ್ನಡ ಸಾಹಿತ್ಯಕ್ಕೆ ಗದ್ಯಕ್ಕಿಂತ ಪದ್ಯದ ಕಡೆಗೆ ಒಲವು ಹೆಚ್ಚಾಗಿ ಆ ಶತಮಾನವು ಚಂಪೂಯುಗದ ಸುವರ್ಣಕಾಲ ಎನಿಸಿದೆ. ಕ್ರಿ.ಶ. ಸುಮಾರು ೮೫೦ರ 'ಕವಿರಾಜಮಾರ್ಗ'ದಲ್ಲಿ ಗದ್ಯ ಕಾವ್ಯದ ಲಕ್ಷಣಗಳನ್ನು ತಿಳಿಸಿದೆ. ಕನ್ನಡದ ಪ್ರಥಮ ಗದ್ಯ ಕೃತಿ ಕ್ರಿ.ಶ ಸುಮಾರು ೮೨೫ರಲ್ಲಿ ರಚಿತವಾದ 'ವಡ್ಡರಾಧನೆ' ಎಂದು ಹೇಳಲಾಗಿದೆ. ಶಿವಕೋಟ್ಯಾಚಾರ್ಯನೆಂಬ ಪ್ರಾಕೃತ ಕವಿ ಆ ಭಾಷೆಯಲ್ಲಿ ತಾನು ರಚಿಸಿದ 'ಭಗವತಿ ಆರಾಧನ' ಕೃತಿಯನ್ನು ಕನ್ನಡಕ್ಕೆ 'ವಡ್ಡರಾಧನೆ' ಎಂಬ ಹೆಸರಿನಲ್ಲಿ ರಚಿಸುತ್ತಾನೆ".

ಇತ್ತೀಚಿನ ದಿನಗಳಲ್ಲಿ ಸಂಶೋಧಕ, ವಿದ್ವಾಂಸ ಹಂಪನಾಗರಾಜಯ್ಯರವರು ತಮ್ಮ ಸಂಶೋಧನೆಯಿಂದ 'ಬ್ರಾಜಿಷ್ಣು' ವಡ್ಡರಾಧನೆಯ ಕರ್ತೃ ಎನ್ನುತ್ತಾರೆ. ಹಳಗನ್ನಡ ಗದ್ಯಕ್ಕೆ ಈ ಕೃತಿ ಒಳ್ಳೆಯ ಮಾದರಿಯಾಗಿದೆ. ಪಂಪನ ಕಾಲದಿಂದ ಹರಿದು ಬಂದಿರುವ ಚಂಪೂ ಕೃತಿಗಳಲ್ಲಿನ ಗದ್ಯದಲ್ಲಿ ಸ್ಪಷ್ಟತೆ, ಸರಳತೆಗಳನ್ನು ಕಾಣಬಹುದು. ೧೦ನೆಯ ಶತಮಾನದಲ್ಲಿ ಬಾಣನ ಕೃತಿಯನ್ನೇ

ಅನುಸರಿಸಿ ನಾಗವರ್ಮನು ಬರೆದ 'ಕಾದಂಬರಿ'ಯಲ್ಲಿ ಕಥೆ ಕಾದಂಬರಿಗಳನ್ನು ಕುರಿತ ರೂಪುರೇಷೆಗಳಿವೆ.

ಕನ್ನಡ ಕಾವ್ಯಗಳಲ್ಲಿ ಕಂಡು ಬರುವ ಚಂಪೂ ಗದ್ಯವು ಗದ್ಯ ಸಾಹಿತ್ಯದ ಬೆಳವಣಿಗೆಗೆ ಪೋಷಕವಾಯಿತು. ೧೨ ಮತ್ತು ೧೪ನೆಯ ಶತಮಾನಗಳ ನಡುವೆ ಜನಜೀವನದಲ್ಲೂ ಸಾಹಿತ್ಯದಲ್ಲೂ ವೀರಶೈವ ಕ್ರಾಂತಿ ಎದ್ದು ಅದರ ಫಲವಾಗಿ ಹೊಸಗದ್ಯರೂಪಗಳಾದ ವಚನ ಮತ್ತು ಪದ್ಯ ರೂಪಗಳಾದ ರಗಳೆ, ತ್ರಿಪದಿ, ಷಟ್ಪದಿ ಛಂದಸ್ಸುಗಳಲ್ಲಿ ಕಾವ್ಯಗಳು ರಚಿತವಾದುವು. ಗದ್ಯ ಶೈಲಿ ಸಹ ಚಂಪೂ ಗದ್ಯ ಶೈಲಿಯನ್ನು ಬಿಟ್ಟು ಆಡು ಬಾಷೆಯ ಹತ್ತಿರ ಹತ್ತಿರಕ್ಕೆ ಬಂದಿತು. ಹೊಯ್ಸಳ ವೀರಬಲ್ಲಾಳನ ಕಾಲದ ಕವಿ ಹರಿಹರನ (ಸು. ೧೨೧೬)ರಗಳೆಯ ಪದ್ಯ ಭಾಗದಲ್ಲಿ ಹೇಗೋ ಹಾಗೆ ಗದ್ಯ ಭಾಗದಲ್ಲೂ ಸಹ ಕಥೆ ಹಾಗೂ ವರ್ಣನೆ ನಿರರ್ಗಳವಾಗಿ ಸಾಗುತ್ತದೆ. ೧೦ನೆಯ ಶತಮಾನದಿಂದ ೧೭ನೆಯ ಶತಮಾನದವರೆಗೆ ನಿಜಗುಣಶಿವಯೋಗಿ,ಗುಬ್ಬಿಯ ಮಲ್ಲಣ್ಣ ಮೊದಲಾದವರ ವೀರಶೈವ ಶಾಸ್ತ್ರೀಯ ಗ್ರಂಥಗಳನ್ನು ಬಿಟ್ಟರೆ ಗದ್ಯ ಸಾಹಿತ್ಯ ಪುಷ್ಟವಾಗಿ ಬೆಳೆಯಲಿಲ್ಲ. ೧೭ನೆಯ ಶತಮಾನದಲ್ಲಿ ಚಿಕ್ಕದೇವರಾಯನ (೧೬೭೨ - ೧೭೦೪) ಆಶ್ರಯದಲ್ಲಿ ಇತಿಹಾಸ ಮೊದಲಾದುವನ್ನು ಬರೆಯಲು ಗದ್ಯವನ್ನು ಹದಗೊಳಿಸುವ ಪ್ರಯತ್ನಗಳು ಕಂಡು ಬರುತ್ತದೆ.

ಚಿಕ್ಕದೇವರಾಯನು 'ಚಿಕ್ಕದೇವರಾಜ ಬಿನ್ನಪ'ವನ್ನು ಗದ್ಯದಲ್ಲಿ ರಚಿಸಿದ್ದಾನೆ. ಅವನ ಆಸ್ಥಾನಿಕನಾಗಿದ್ದ ತಿರುಮಲಾರ್ಯ ಮತ್ತು ಚಿಕ್ಕುಪಾಧ್ಯಾಯ ಶ್ರೇಷ್ಠ ಗದ್ಯಕಾರರು. ತಿರುಮಲಾರ್ಯನ 'ಚಿಕ್ಕದೇವವಂಶಾವಳಿ'ಯ ಭಾಷೆ ಪ್ರೌಢವಾಗಿರುವುದಲ್ಲದೆ ಹಳಗನ್ನಡ ಧಾಟಿಯಲ್ಲಿದೆ. ಕನ್ನಡ ಗದ್ಯದ ಬೆಳವಣಿಗೆಯಲ್ಲಿ ೧೮ನೆಯ ಶತಮಾನದಲ್ಲಿ ರಚನೆಯಾದ ಬಖೈರು ಹಾಗೂ ಕೈಫಿಯತ್ತುಗಳು ಉರ್ದು ಮತ್ತು ಪಾರಸಿ ಶಬ್ಧಗಳಿಂದ ಕೂಡಿದ್ದರೂ ಅವುಗಳ ಕನ್ನಡ ಗದ್ಯಶೈಲಿ ಇತಿಹಾಸವನ್ನು ಚಿತ್ರಿಸುವ ಅಂದವಾದ ಶೈಲಿ ಆಗಿದೆ. ಒಟ್ಟಿನಲ್ಲಿ ಹೇಳುವುದಾದರೆ ೧೮ ಮತ್ತು ೧೯ನೆಯ ಶತಮಾನಗಳಲ್ಲಿ ಕನ್ನಡ ಗದ್ಯ ಸಾಹಿತ್ಯ ವಿಪುಲವಾಗಿ ಬೆಳೆಯಿತೆನ್ನಬಹುದು. ಆ ಕಾಲವನ್ನು ಗದ್ಯ ಸಾಹಿತ್ಯದ ಸುವರ್ಣಯುಗವೆಂದು ಹೇಳಬಹುದಾಗಿದೆ.

## ಕಾದಂಬರಿಯ ಉಗಮ ಮತ್ತು ನಡೆ:-

೧೯ನೆಯ ಶತಮಾನದ ಉತ್ತರಾರ್ಧದ ಹೊತ್ತಿಗೆ ೧೮೫೭ರಲ್ಲಿ ಕಲ್ಕತ್ತ, ಮುಂಬಯಿ, ಮದರಾಸು ಅಧಿಪತ್ಯಗಳಲ್ಲಿ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾಗಿ ೧೮೫೮ರಲ್ಲಿ ಮೈಸೂರು ಸಂಸ್ಥಾನದಲ್ಲಿ ಸಹ ಕಾಲೇಜು ವ್ಯಾಸಂಗಕ್ಕೆ ಅವಕಾಶ ಕಲ್ಪಿತವಾದ ಮೇಲೆ ಇಂಗ್ಲಿಷ್ ವ್ಯಾಸಂಗದ ಪ್ರಭಾವ ಭಾರತದ ಇತರ ಭಾಷೆಗಳ ಮೇಲೆ ಬಿದ್ದಂತೆ ಕನ್ನಡ ಸಾಹಿತ್ಯದ ಮೇಲೂ ಬಿದ್ದಿತು. ಇಂಗ್ಲೀಷ್ ಸಾಹಿತ್ಯ ಪ್ರೇರಣೆಯಿಂದ ಹೊಸಗನ್ನಡದಲ್ಲಿ ಕಾದಂಬರಿ, ಸಣ್ಣಕಥೆ, ಪ್ರಬಂಧ, ಭಾವಗೀತೆ, ಜೀವನ ಚರಿತ್ರೆ ಮೊದಲಾದ

ಪ್ರಕಾರಗಳು ಹುಟ್ಟಿದವು. ಕರ್ನಾಟಕದಲ್ಲಿ ಈ ಪ್ರಕಾರದ ಕೃತಿಗಳನ್ನು ರಚಿಸಲು ಸಾಹಿತ್ಯಾಭಿರುಚಿಯುಳ್ಳ ವಿದ್ವಾಂಸರು ಮುಂದಾದರು. ಆ ಮೊದಲೇ ಮುಮ್ಮಡಿಕೃಷ್ಣರಾಜಒಡೆಯರ ಆಸ್ಥಾನಕ್ಕೆ ಕೆಂಪು ನಾರಾಯಣ, ವಿಶಾಖದತ್ತನ 'ಮುದ್ರಾರಾಕ್ಷಸ' ನಾಟಕದ ಆಧಾರದ ಮೇಲೆ ೧೮೨೩ರಲ್ಲಿ 'ಮುದ್ರಾಮಂಜುಷ' ಎಂಬ ಗದ್ಯ ಕೃತಿ ರಚಿಸಿದ. ಅದರಲ್ಲಿ ಕನ್ನಡ ಕಾದಂಬರಿಯ ರೂಪುರೇಷೆಗಳನ್ನು ಗುರುತಿಸಬಹುದಾಗಿದೆ. "ಸಂವಿಧಾನ, ಸಂಭಾಷಣೆಯ ರೀತಿ, ಸಮಕಾಲೀನ ಭಾಷೆಯ ಬಳಕೆ, ಜನಜೀವನ ಚಿತ್ರಣ ಹೀಗೆ ಹಲವಾರು ದೃಷ್ಟಿಗಳಿಂದ ಮುದ್ರಾಮಂಜುಷ ಆಧುನಿಕ ಮುದ್ರೆಯನ್ನು ಹೊತ್ತುಕೊಂಡಿದೆ. ಅದರ ಭಾಷೆಯಲ್ಲಿ ದೇಶಿಯ ಸತ್ವ ಸೊಗಡು ವಿಶೇಷವಾಗಿ ಮನೆಮಾಡಿಕೊಂಡಿದೆ".

ಮುದ್ದಣ (ನಂದಳಿಕೆ ಲಕ್ಷ್ಮೀನಾರಾಯಣಪ್ಪ) (೧೮೭೦-೧೯೦೧) 'ರಾಮಾಶ್ವಮೇಧ' ಕೃತಿಯನ್ನು ಹೊಸಗನ್ನಡ ಸಾಹಿತ್ಯಕ್ಕೆ ಕೊಡುಗೆಯನ್ನು ಬರೆದು ಮುಗಿಸುವಷ್ಟರಲ್ಲೇ ಕಾಲವಾದ ಗುಲ್ವಾಡಿವೆಂಕಟರಾಯರು 'ಇಂದಿರಾಬಾಯಿ' ಅಥವಾ ಸದ್ಧರ್ಮವಿಜಯ ಎಂಬ ಕಾದಂಬರಿಯನ್ನು ೧೮೯೯ರಲ್ಲಿ ರಚಿಸಿ ನೀಡಿದ್ದಾರೆ. ಅವರ ಮತ್ತೆರಡು ಕಾದಂಬರಿಗಳು 'ಭಾಗಿರಥಿ' ಮತ್ತು 'ಸೀಮಂತಿನಿ'. ಗುಲ್ವಾಡಿ ಅವರ ಕಾದಂಬರಿಗಳ ರಚನೆಗೆ ಹಿಂದೆಯೇ ಬಿ.ವೆಂಕಟಚಾರ್ಯರು ಬಂಕಿಮಚಂದ್ರರ ಬಂಗಾಳಿ ಕಾದಂಬರಿಗಳನ್ನು ಭಾಷಂತರಿಸಲು ತೊಡಗಿ ಹಾಗೆ ಭಾಷಂತರಿಸಿದ ತಮ್ಮ ಮೊದಲ ಕಾದಂಬರಿ 'ದುರ್ಗೇಶನಂದಿನಿ'ಯನ್ನು ೧೮೬೫ರಲ್ಲಿ ಹೊರತಂದರು. ಗಳಗನಾಥರ ಪ್ರಥಮ ಕಾಲ್ಪನಿಕ ಕಾದಂಬರಿ 'ಪದ್ಮನಯನೆ' ೧೮೬೫ರಲ್ಲಿ ಪ್ರಕಟವಾಯಿತು. ಮಂಗಳೂರಿನ ಬೋಳಾರಬಾಬುರಾಯರು ಸ್ವತಂತ್ರ ಕಾದಂಬರಿ 'ವಾಗ್ದೇವಿ'ಯನ್ನು ೧೯೦೬ರಲ್ಲಿ ಬರೆದರು. ಕಾದಂಬರಿಯ ಬೆಳವಣಿಗೆಯಲ್ಲಿ ನವೀನತೆ ಮತ್ತು ಆಧುನಿಕತೆಗಳು ಸ್ಪಷ್ಟವಾಗಿ ಕಾಣಿಸಿಕೊಳ್ಳುವುದು ಎಂ.ಎಸ್.ಪುಟ್ಟಣ್ಣನವರ 'ಮಾಡಿದುಣ್ಣೋ ಮಹರಾಯ' ಕಾದಂಬರಿಯಲ್ಲಿ (೧೯೧೫).

ಕನ್ನಡ ಕಾದಂಬರಿಗಳಿಗೆ ಐತಿಹಾಸಿಕ ಹಾಗೂ ಸಾಮಾಜಿಕ ವಸ್ತು ನಮ್ಮಲ್ಲೇ ವಿಫುಲವಾಗಿದೆ ಎಂಬುದನ್ನು ಕಂಡುಕೊಂಡ ಮೊದಲಿಗರಲ್ಲಿ ಪುಟ್ಟಣ್ಣನವರೂ ಒಬ್ಬರು. ಆಗ ಕಾದಂಬರಿ ಪ್ರಕಾರ ಕನ್ನಡ ಜಾಯಮಾನಕ್ಕೆ ಒಗ್ಗೀತೇ ಎಂಬ ಸಂಶಯವಿದ್ದ ಕಾಲದಲ್ಲಿ ತಮ್ಮ ಪ್ರಯೋಗ ತೃಪ್ತಿಕರವಾಗಿ ಪರಿಣಮಿಸತು.

ಕನ್ನಡದಲ್ಲಿ ಮೊದಲನೆಯ ಸಾಮಾಜಿಕ ಕಾದಂಬರಿ ಯಾವುದೆಂಬ ಬಗ್ಗೆ ವಿವಾದವಿದೆ. "ಲಕ್ಷ್ಮಣಭೀಮರಾವ ಗದಗಕರ ರವರ 'ಸೂರ್ಯಕಾಂತ' (೧೮೯೨) ಕನ್ನಡ ಮೊದಲ ಕಾದಂಬರಿ ಎಂಬುದು ಡಾ.ಹಾವನೂರ ಅವರ ಅಭಿಪ್ರಾಯ". ವಸ್ತು, ವಾತಾವರಣ,ಪಾತ್ರ ಚಿತ್ರಣ ಹಾಗೂ ಶೈಲಿ ಈ ಎಲ್ಲಾ ದೃಷ್ಟಿಗಳಿಂದ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಅಥವಾ 'ಸದ್ಧರ್ಮವಿಜಯವೇ ಪ್ರಪ್ರಥಮ ಕಾದಂಬರಿಯೆಂದು ಪಂಜೆಮಂಗೇಶರಾಯರು, ಗೋವಿಂದಪೈ,ರಂ. ಶೀ ಮುಗಳಿ, ಶಿವರಾಮಕಾರಂತರವರೆಲ್ಲಾ ಒಪ್ಪುತ್ತಾರೆ. ಅ.ನ. ಕೃಷ್ಣರಾಯರು "ಎಂ.ಎಸ್.ಪುಟ್ಟಣ್ಣನವರ

'ಮಾಡಿದುಣ್ಣೋ ಮಹರಾಯ ಮತ್ತು ಕೆರೂರುವಾಸು ದೇವಾಚಾರ್ಯರ 'ಇಂದಿರಾ' ಇವುಗಳಿಂದಲೇ ಆಧುನಿಕ ಕಾದಂಬರಿಯ ಇತಿಹಾಸ ಪ್ರಾರಂಭವಾಯಿತೆಂದು ಹೇಳಬಹುದು" ಎಂದು ತಿಳಿಸುತ್ತಾರೆ. 'ಕುರ್ತುಕೋಟಿರವರು ತಿಳಿಸುವಂತೆ ಸಾಮಾಜಿಕ ಕಾದಂಬರಿಗಳನ್ನು ಬರೆಯುವ ಪ್ರಯತ್ನಗಳಲ್ಲಿ ಬೋಳಾರಬಾಬು ರಾಯರ 'ವಾಗ್ದೇವಿ' ಎಂ.ಎಸ್.ಪುಟ್ಟಣ್ಣನವರ ಮಾಡಿದುಣ್ಣೋ ಮಹಾರಾಯ ಹಾಗೂ ಕೆರೂರ ವಾಸುದೇವಾಚಾರ್ಯರ 'ಇಂದಿರಾ' ಈ ಕಾದಂಬರಿಗಳು ಮುಖ್ಯವಾಗಿವೆ".

ಈ ಮೂರು ಸಾಮಾಜಿಕ ಕಾದಂಬರಿಗಳೂ ಕನ್ನಡ ಕಾದಂಬರಿಯ ಸ್ವರೂಪವನ್ನು ನಿಶ್ಚಿತಗೊಳಿಸಲು ಪ್ರಯತ್ನಿಸಿದವು. ಇಂದಿನ ಜೀವನದ ಕಷ್ಟಸುಖ ಹಾಗೂ ಸಮಸ್ಯೆಗಳು ಕಾದಂಬರಿಯ ವಸ್ತುಗಳಾಗಬಲ್ಲವೆಂಬುದನ್ನು ತೋರಿಸಿ ಕೊಟ್ಟವರು ಎಂ.ಎಸ್ ಪುಟ್ಟಣನವರು ಮತ್ತು ಕೆರೂರ ವಾಸುದೇವಾಚಾರ್ಯರು. ಕಾದಂಬರಿ ಪ್ರಕಾರ ಒಂದು ಸ್ಥಿರವಾದ ರೂಪವನ್ನು ತಾಳಬೇಕಾಗಿದ್ದ ಹೊಸಗನ್ನಡ ಉದಯಕಾಲದಲ್ಲಿ ಇವರೆಲ್ಲಾ ಮಾಡಿದ ಪ್ರಯತ್ನಗಳು ಕಾದಂಬರಿಕಾರರಿಗೆ ಮಾರ್ಗದರ್ಶನವಾಗಿ ಪರಿಣಮಿಸಿದವು.

ಕನ್ನಡ ಕಾದಂಬರಿಯು ಭಾರತೀಯ ಅಸ್ಥಿತ್ವ ಪಡೆಯುವಷ್ಟು ಹಿರಿಮೆಗರಿಮೆಗಳನ್ನು ಪಡೆದು ರಚನೆಗೊಂಡಿದ್ದು ಎರಡನೇ ಘಟ್ಟದಲ್ಲಿ, ಶಿವರಾಮಕಾರಂತ, ಶ್ರೀರಂಗ, ರಂ. ಶ್ರೀ ಮುಗಳಿ, ಗೋಕಾಕ್, ಕುವೆಂಪು ಜೀವಂತ ಜಗತ್ತನ್ನು ಚಿತ್ರಿಸುವ ಗಟ್ಟಿಯಾದ ಅನುಭವವುಳ್ಳ ಕಾದಂಬರಿಗಳನ್ನು ರಚಿಸಿ ಕಾದಂಬರಿ ಯುಗವನ್ನೇ ನಿರ್ಮಿಸಿದರು. ನಂತರ ಪ್ರಗತಿಶೀಲಘಟ್ಟದಲ್ಲಿ ಅ.ನ.ಕೃ, ತ.ರಾ.ಸು, ಕಟ್ಟಿಮನಿ, ನಿರಂಜನ; ಚದುರಂಗ, ಎಸ್.ಎಲ್.ಭೈರಪ್ಪ ಮೊದಲಾದ ದಿಗ್ಗಜರು ಸಾಮಾಜಿಕ ಕಾದಂಬರಿಗಳನ್ನು ರಚಿಸಿದರು.

## ಕಾದಂಬರಿ ಸ್ವರೂಪ;-

ಕಾದಂಬರಿ ವಾಸ್ತವ ಘಟನೆಯ ಯಥಾವತ್ ವರದಿಯಲ್ಲ. ನಡೆದ ಘಟನೆಯ ವರದಿಯನ್ನು ಕೊಡಲು ಕಾದಂಬರಿಕಾರನೇ ಬೇಕಾಗಿಲ್ಲ. ಕಾದಂಬರಿಕಾರನ ಕೈವಾಡವನ್ನು ಗಮನಿಸಿದರೆ ಮಾತ್ರ ಕಾದಂಬರಿ ಎಂತಹ ಬರವಣಿಗೆ ಎಂಬುದು ಗೊತ್ತಾಗುತ್ತದೆ. ಅದು ಒಂದು ಸೃಜನಶೀಲ ಕೃತಿ. ಕಾದಂಬರಿಕಾರನ ಕಲ್ಪನೆ ಅತ್ಯಂತ ಮುಖ್ಯವಾದುದು. ಅವನು ಒಂದು ಕಥೆಯನ್ನು ಮನಸ್ಸಿನಲ್ಲಿಯೇ ಹುಟ್ಟುಹಾಕಿ ಬೆಳಸುತ್ತಾನೆ. ಕಥೆಯನ್ನು ಹೇಳುವ ಹಾಗೂ ಕೇಳುವ ಕುತೂಹಲ, ಆಸಕ್ತಿ ಪ್ರತಿಯೊಬ್ಬರಿಗೂ ಇರುತ್ತದೆ. ಅದು ನಡೆದಿರಲಾರದು ಎಂಬ ಅನುಮಾನವಿದ್ದರೂ ನಡೆಯಬಹುದು ಎಂದು ಮೊದಲೇ ಹೇಳಲಾಗುವುದಿಲ್ಲ. ಆದ್ದರಿಂದಲೇ ಕಾದಂಬಯನ್ನು ಬರೆಯಲು ಪ್ರಾರಂಭಿಸಿದಾಗ ಬೆಳವಣಿಗೆ ಮತ್ತು ಮುಕ್ತಾಯದ ಎಲ್ಲಾ ಹಂತಗಳನ್ನು ಲೇಖಕನು ಖಚಿತವಾಗಿ ಸಿದ್ದಪಡಿಸಿಕೊಳ್ಳಲಾರನು. ಲೇಖಕನ ಕಲ್ಪನಾವಿಲಾಸ ಎತ್ತೆತ್ತಲೋ ಸಾಗುತ್ತ ಕಥೆಯನ್ನು ಬೆಳೆಸುತ್ತಾ

ಹೋಗುತ್ತದೆ. ಹೊಳೆಯು ಅದರ ದಾರಿಯನ್ನು ಕಂಡುಕೊಳ್ಳುವಂತೆ ಕಾದಂಬರಿಯೂ ಹರಿಯುತ್ತಾ ಹರಿಯುತ್ತಾ ಸಾಗಿ ಓದುಗರ ಮನೋಸಮುದ್ರವನ್ನು ಸೇರುತ್ತದೆ.

ಕಾದಂಬರಿಯು ಧೀರ್ಘವಾದ ಗದ್ಯ ಬರವಣಿಗೆಯಾದುದರಿಂದ ಅದನ್ನು ಹಲವು ಅಧ್ಯಾಯಗಳನ್ನಾಗಿ ವಿಭಜಿಸಬೇಕಾಗುತ್ತದೆ. ಕಾದಂಬರಿಯಲ್ಲಿ ಮೂರು–ನಾಲ್ಕು ಕುಟುಂಬಗಳು ಸ್ಥಳಗಳು ಪಾಲ್ಗೊಂಡಿರುತ್ತವೆಯಾದ್ದರಿಂದ ಕ್ರಿಯೆಯು ನಡೆಯುವ ಸ್ಥಳಗಳು ಬದಲಾಗುತ್ತಾ ಹೋಗುತ್ತದೆ. ಅಂತಹ ಬದಲಾವಣೆಗಳನ್ನು ಅಧ್ಯಾಯಗಳ ರಚನೆಯ ಮೂಲಕ ಸೂಚಿಸಬಹುದು. ಒಂದೊಂದು ಅಧ್ಯಾಯವೂ ಒಂದೊಂದು ಮೆಟ್ಟಲು, ಓದುಗರು ಮೆಟ್ಟಿಲುಗಳನ್ನು ಎರುತ್ತಾಹೋಗುತ್ತಾರೆ. ಮೊದಲು ಕಥೆಯು ಬೆಳೆಯುತ್ತಾ ಹೋಗಿ ತುತ್ತತುದಿಯನ್ನು ಮುಟ್ಟಿದಂತೆ ಅನ್ನಿಸಿ ಅನಂತರ ಇಳಿಯುತ್ತಾ ಹೋದಂತೆ ತೋರುತ್ತದೆ. ಲೇಖಕನು ಸಮಸ್ಯೆಗಳನ್ನು ಜಟಿಲತೆಯನ್ನು ಹುಟ್ಟಿಹಾಕಿ ತನ್ಮೂಲಕ ಸನ್ನಿವೇಶಗಳನ್ನು ಘಟನೆಗಳನ್ನು ನಿರ್ಮಿಸುತ್ತಾ ಕುತೂಹಲವು ಓದುಗನ ಮನಸ್ಸಿನಲ್ಲಿ ಹುಟ್ಟುತ್ತದೆ.

ಕಾದಂಬರಿಯನ್ನು ಪ್ರಾರಂಭಿಸುವ ತಂತ್ರ ಮತ್ತು ಮುಗಿಸುವ ತಂತ್ರ ಇವೆರಡೂ ಬಹಳ ಮುಖ್ಯ. ಲೇಖಕನ ಕಲೆಯ ಶಕ್ತಿ ಇಲ್ಲಿ ಪ್ರಕಟವಾಗುತ್ತದೆ. ಸಾಮಾನ್ಯವಾಗಿ ಯಾವುದೋ ಘಟನೆಯಿಂದ, ಸನ್ನಿವೇಶದಿಂದ, ಸಂಭಾಷಣೆಯಿಂದ ಪ್ರಾರಂಭವಾಗುತ್ತದೆ. ಕಥೆಯು ಮುಂದುವರಿಯುತ್ತಾ ಹೋದಂತೆ ಹಿಂದಿನ ಹತ್ತೂ ಹಲವು ವಿಷಯಗಳು ಕಾಣಿಸಿಕೊಂಡು ಮರೆಯಾಗುತ್ತವೆ. ಭೂತಕಾಲ, ಭವಿಷ್ಯತ್ಕಾಲಗಳ ಅಪೂರ್ವ ಸಮ್ಮಿಲನ ಇಲ್ಲಿ ಕಂಡುಬರುತ್ತದೆ. ಪರಿಸರದ ಪ್ರಕೃತಿಯ ವರ್ಣನೆಯು ಮನುಷ್ಯರಿಗೆ ಸಂಬಂಧಿಸಿದಂತೆಯೇ ಬರುತ್ತದೆ. ಪ್ರಕೃತಿಯ ಎಲ್ಲ ವ್ಯಾಪಾರಗಳೂ ತಮ್ಮ ಪಾಡಿಗೆ ನಡೆದರೂ ಮನುಷ್ಯನು ಅದರಲ್ಲಿ ಒಂದು ಭಾಗವಾಗಿರುತ್ತಾನೆ.

ಜನರ ನಂಬಿಕೆಗಳು, ಸಂಪ್ರದಾಯಗಳು, ಜಾತಿಮತ, ಅರಿಷಡ್ವರ್ಗಗಳು, ಎಲ್ಲವೂ ಕಾದಂಬರಿಯಲ್ಲಿ ಸ್ಥಾನ ಪಡೆಯುತ್ತವೆ. ಲೇಖಕನು ತಾನು ನಿರ್ಲಿಪ್ತನಾಗಿ ನಿರೂಪಿಸುತ್ತಾ ಹೋಗುತ್ತಾನೆ. ಕಾದಂಬರಿಯು ಎಲ್ಲಾದರೂ ಒಂದು ಕಡೆ ನಿಲ್ಲಲೇಬೇಕು ಜೀವನ ನಿಲ್ಲುವುದಿಲ್ಲ ಲೇಖಕ ನಿಲ್ಲುತ್ತಾನೆ. ಓದುಗರು ಬೇರೊಂದು ಲೋಕದಿಂದ ವಾಸ್ತವ ಲೋಕಕ್ಕೆ ಬರುತ್ತಾರೆ.

'ಅಪಾರೇ ಕಾವ್ಯ ಸಂಸಾರೇ ಕವಿರೇವ ಪ್ರಜಾಪತಿಃ' ಎಂಬ ಮಾತಿನಂತೆ ಈ ವಿಶಾಲವಾದ ಕಾವ್ಯ ಜಗತ್ತಿನಲ್ಲಿ ಕವಿಯೇ ಬ್ರಹ್ಮ, ಏಕೆಂದರೆ ಲೇಖಕನೇ ಕಾದಂಬರಿ ಲೋಕವನ್ನು ಸೃಷ್ಟಿಸಿ ಅಲ್ಲಿಯ ಜೀವನ ನಿಜವಾದುದೆಂಬ ಭ್ರಮೆಯನ್ನು ಹುಟ್ಟಿಸುತ್ತಾನೆ. ಕಾದಂಬರಿ ಮುಗಿದಾಗ ಭ್ರಮೆಯೂ ಮಾಯವಾಗುತ್ತದೆ.

ಕಾದಂಬರಿಯು ಸಾಕಷ್ಟು ಧೀರ್ಘವಾದ, ಗದ್ಯರೂಪದಲ್ಲಿರುವ, ಅಧ್ಯಾಯಗಳಿಂದ ಕೂಡಿದ ಕೂತೂಹಲ ಹುಟ್ಟಿಸುವ, ಪ್ರಾರಂಭದಿಂದ ಕೂಡಿದ, ಮುಕ್ತಾಯ ರಮಣೀಯತೆಯನ್ನು ಹೊಂದಿರುವ ಕಥನ ಕಲೆ ಎಂದು ಹೇಳಬಹುದು

**ವಸ್ತು ವಿನ್ಯಾಸ ಮತ್ತು ನಿರೂಪಣೆ:-**

ಕಾದಂಬರಿಯ ವಸ್ತುವಿನ ಲಕ್ಷಣ, ಆ ವಸ್ತು ಬದುಕಿನ ಮೌಲ್ಯಗಳಿಗೆ ಎಷ್ಟರಮಟ್ಟಿಗೆ ಸಂಬಂಧಪಟ್ಟಿದೆ ಎಂಬುದರ ಮೇಲೆ ನಿಂತಿರುತ್ತದೆ. ಕಾದಂಬರಿಗೆ ವಸ್ತುವನ್ನು ಆರಿಸಿಕೊಂಡ ಮೇಲೆ ಕಾದಂಬರಿಕಾರನ ದೃಷ್ಟಿಯು ಕಾದಂಬರಿಯ ವಿನ್ಯಾಸದ ಕಡೆ ಹರಿಯುತ್ತದೆ. ಅಂದರೆ ಕಾದಂಬರಿಯ ಕಥೆಯನ್ನು ಹೇಗೆ ಯೋಚಿಸಬೇಕು? ಅದರ ನಕ್ಷೆ ಹೇಗಿರಬೇಕು? ಇತ್ಯಾದಿ ಅಂಶಗಳ ಕಡೆ ಕಾದಂಬರಿಕಾರ ಗಮನಹರಿಸುತ್ತಾನೆ.

ಜನಸಾಮಾನ್ಯರಿಗೆ ಜೀವನದ ಗಹನ ತತ್ವ-ವಿಚಾರಗಳನ್ನು ಹಾಗೂ ಸಮಸ್ಯೆಗಳನ್ನು ಪರಿಚಯಿಸಲು ಕಾದಂಬರಿ ಉತ್ತಮಸಾಧನ ಎನ್ನಬಹುದು. "ವಸ್ತು ಯಾವುದೇ ಆಗಿದ್ದರೂ ಅದು ಕಾದಂಬರಿಯಲ್ಲಿ ಕಲೆಯಾಗಿ ಅರಳಬೇಕು ರಸ-ಭಾವಸ್ಥಿತಿಯನ್ನೈದಬೇಕು".[೧](ಕಾರಂತರ ಕೆಲವು ಕತೆಗಳು) ಎಂಬ ಸಿ.ಪಿ.ಕೆ. ಮಾತುಗಳನ್ನು ಪ್ರಸ್ತುತ ಸಂದರ್ಭದಲ್ಲಿ ಉದ್ಧರಿಸಬಹುದು.

ಎಚ್.ಎಲ್.ನಾಗೇಗೌಡರ "ದೊಡ್ಡಮನೆ" ಕಾದಂಬರಿಯಲ್ಲಿ ದಾಯಾದಿ ಮಾತ್ಸರ್ಯ, 'ಸೊನ್ನೆಯಿಂದ ಸೊನ್ನೆಗೆ'ಯಲ್ಲಿ ದರಿದ್ರನ ಮಗನೊಬ್ಬ ಧನಿಕನಾಗಿ ಮತ್ತೆ ಸನ್ಯಾಸತ್ವದ ಭಿಕ್ಷಾಟನೆಯನ್ನು ಅವಲಂಬಿಸುವುದು, 'ಭೂಮಿಗೆ ಬಂದ ಗಾಂಧರ್ವ'ದಲ್ಲಿ ಸಂಗೀತಗಾರನ ಜೀವನ ರೇಖೆಗಳನ್ನು ಬಿಡಿಸುವುದು ಇವುಗಳಿಗೆ ಅನೇಕ ಬಿಡಿಪ್ರಸಂಗಗಳು ಸೇರಿಕೊಳ್ಳುವುದು ಕಂಡುಬರುತ್ತದೆ. ಹಾಗಾಗಿ ಇವರ ಕಾದಂಬರಿಗಳ ವಸ್ತು ಬಹಳ ಮಹತ್ವವನ್ನು ಪಡೆದುಕೊಂಡಿವೆ ಎನ್ನಬಹುದು.

# ಅಧ್ಯಾಯ – ೩

## ಎಚ್.ಎಲ್.ನಾಗೇಗೌಡ : ಜೀವನ ಸಾಧನೆ.

೨೦ನೇ ಶತಮಾನದ ಆದಿಭಾಗದಲ್ಲಿ ಕನ್ನಡ ಸಾಹಿತ್ಯದಲ್ಲಿ ಉಂಟಾದ ನವೋದಯಕ್ರಾಂತಿ ಹಲವು ದೃಷ್ಟಿಗಳಿಂದ ವಿಭಿನ್ನತೆ ಹೊಂದಿದೆ. ವಿಶ್ವವಿಶಾಲವಾದ ಲೌಕಿಕ ಜ್ಞಾನಸಂಪಾದನೆಯನ್ನು, ವೈಜ್ಞಾನಿಕ ಮನೋಭಾವನೆಯನ್ನು, ಸ್ವತಂತ್ರ್ಯಬುದ್ಧಿ, ವಿವೇಚನೆಯನ್ನು ಪ್ರಧಾನವಾಗಿಟ್ಟುಕೊಂಡು ರಚನೆಯಾದ ಈ ಸಾಹಿತ್ಯ ಪ್ರಕಾರ ನಮ್ಮ ದೇಶಿಯ ಸಾಹಿತ್ಯದ ಸತ್ವಗಳ ಜೊತೆಗೆ ಪಾಶ್ಚಾತ್ಯದ ಭಾವನೆ, ಯೋಚನೆ, ಚಿಂತನೆಗಳನ್ನು ಅಳವಡಿಸಿಕೊಂಡು, ಸಮನ್ವಯಗೊಳಿಸಿಕೊಂಡು ಶ್ರೀಮಂತವಾಗಿ ಬೆಳೆದು ಬಂದಿದೆ. ಹಿಂದೆಂದೂ ಕಾಣದಷ್ಟು ವೈವಿಧ್ಯತೆ, ವೈಫುಲ್ಯತೆ, ವಿಶಾಲತೆ ಈ ನವೋದಯ ಯುಗದಲ್ಲಿ ಕಂಡುಬರುತ್ತದೆ. ಇಂಥ ನವೋದಯ ಯುಗದಲ್ಲಿ ಸೃಜನಶೀಲ ಸಾಹಿತ್ಯ ಕೃಷಿಯಲ್ಲಿ ತೊಡಗಿದ ಲೇಖಕರೇ ಶ್ರೀ ಎಚ್.ಎಲ್.ನಾಗೇಗೌಡರು.

### ನಾಗೇಗೌಡರ ಜೀವನ ಪರಿಚಯ:–

ಕನ್ನಡ ನಾಡು–ನುಡಿ ಸಂಸ್ಕೃತಿಗೆ ಅಚ್ಚಳಿಯದ ಸೇವೆಸಲ್ಲಿಸಿರುವ ಎಚ್.ಎಲ್.ನಾಗೇಗೌಡರು ೧೯೧೫ರ ಫೆಬ್ರವರಿ ೧೧ರಂದು ಮೈಸೂರು ಜಿಲ್ಲೆ (ಈಗ ಮಂಡ್ಯ ಜಿಲ್ಲೆ) ನಾಗಮಂಗಲ ತಾಲ್ಲೂಕು ಹೆರಗನಹಳ್ಳಿ 'ದೊಡ್ಡಮನೆ' ಕುಟುಂಬದಲ್ಲಿ ಜನಿಸಿದರು. ತಂದೆ ದೊಡ್ಡಮನೆ ಲಿಂಗೇಗೌಡರು,ತಾಯಿ ಹುಚ್ಚಮ್ಮ. ಇವರದು ಸಂಖ್ಯಾಬಲದಿಂದಲ್ಲದೆ ಗುಣ, ಆಸ್ತಿಪಾಸ್ತಿ, ಸಂಸ್ಕೃತಿಗಳ ಲೆಕ್ಕದಲ್ಲೂ ದೊಡ್ಡಮನೆಯೆ. ಮೂರು ವರ್ಷದವನಾಗಿರುವಾಗಲೇ ನಾಗೇಗೌಡರ ತಾಯಿ ಕಾಯಿಲೆಗೆ ತುತ್ತಾಗಿ ಸಾವನ್ನಪ್ಪಿದರು. ಅಜ್ಜಿಯ ಮಡಿಲಲ್ಲಿ ನಾಗೇಗೌಡರ ಬಾಲ್ಯ ಕಳೆಯಿತು.

ನಾಗೇಗೌಡರ ತಂದೆ ಲಿಂಗೇಗೌಡರಿಗೆ ತಮ್ಮ ಮಗನು ದೊಡ್ಡ ವಿದ್ಯಾವಂತನಾಗಬೇಕು, ಅಮಲ್ದಾರನಾಗಿ ಕುದುರೆಯ ಮೇಲೆ ಓಡಾಡಬೇಕೆಂಬ ಆಸೆ ಅಪಾರವಾಗಿತ್ತು. ಆಗ ಒಂದೇ ಊರಿನಲ್ಲಿ ವಿಧ್ಯಾಭ್ಯಾಸಕ್ಕೆ ಅನುಕೂಲಗಳಿರಲಿಲ್ಲ. ಹೀಗಾಗಿ ನಾಗೇಗೌಡರು ಹುಟ್ಟೂರಿನಲ್ಲಿ ಕೂಲಿಮಠ, ಪಕ್ಕದ ಅಳೀಸಂದ್ರ ಮತ್ತು ನಾಗತಿಹಳ್ಳಿಗಳಲ್ಲಿ ಪ್ರಾಥಮಿಕ ಹಂತದ ವಿಧ್ಯಾಭ್ಯಾಸ, ಚನ್ನರಾಯಪಟ್ಟಣದಲ್ಲಿ ಮಾಧ್ಯಮಿಕ ಹಂತದ ವಿಧ್ಯಾಭ್ಯಾಸ, ಚನ್ನಪಟ್ಟಣದಲ್ಲಿ ಪ್ರೌಢ ವಿದ್ಯಾಭ್ಯಾಸ ಪಡೆದು ಬೆಂಗಳೂರಿನಲ್ಲಿ ಇಂಟರ್ ಮೀಡಿಯಟ್, ಮೈಸೂರಿನಲ್ಲಿ ಬಿ.ಎಸ್.ಸಿ. ಡಿಗ್ರಿ ಪಡೆದು,

ಪೂನಾದಲ್ಲಿ ಎಲ್.ಎಲ್.ಬಿ ಓದಿ ತನ್ನ ವಿದ್ಯಾಭ್ಯಾಸ ಮುಗಿಸಿದರು. ವಕೀಲರಾಗುವುದನ್ನು ಕೈಬಿಟ್ಟು ಸರ್ಕಾರಿ ಸೇವೆಗೆ ಸೇರಿದರು.

೧೯೪೦ರಲ್ಲಿ ನಡೆದ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು.ಸರ್ಕಾರದ ಉನ್ನತ ಅಧಿಕಾರಿಯಾಗಿಯೂ ಹಳ್ಳಿಯ ಬದುಕಿನ ಸಂಪರ್ಕವನ್ನು ಕಳೆದುಕೊಳ್ಳದೆ, ಅದರ ವರ್ಣವೈವಿಧ್ಯವನ್ನು ಪುನರ್ ನಿರ್ಮಿಸುವ ಆಕಾಂಕ್ಷೆ ಹೊಂದಿದವರಾಗಿ ತಮ್ಮ ಕಾದಂಬರಿಗಳ ಮೂಲಕ ಅದನ್ನು ನೆರವೇರಿಸಿದ್ದಾರೆ. ಇದು ಎಚ್.ಎಲ್.ನಾಗೇಗೌಡರ ಬರವಣಿಗೆಯ ವೈಶಿಷ್ಟ್ಯವಾಗಿದೆ. ನಾಗೇಗೌಡರ ಸಾಹಿತ್ಯದ ಹಿಂದೆ ಅಪಾರವಾದ ತ್ಯಾಗ ಮತ್ತು ದುಡಿಮೆಯಿದೆ. ಈ ದುಡಿಮೆಯಿಂದಾಗಿ ಅವರು ಪ್ರತಿಷ್ಠಿತರಾಗಿದ್ದಾರೆ. ಸಮಕಾಲೀನ ಸಾಹಿತಿಗಳಿಗಿಂತ ಭಿನ್ನರಾಗಿ ಸೃಜನಶೀಲ ಸಾಹಿತ್ಯ, ಅನುವಾದ, ಜಾನಪದ ಕ್ಷೇತ್ರಗಳಲ್ಲಿ ಮೌಲಿಕ ಗ್ರಂಥಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

"ವೃತ್ತಿಯಲ್ಲಿ ನಾಡಿನ ಅತ್ಯಂತ ಹಿರಿಯ ಅಧಿಕಾರಿಗಳಲೊಬ್ಬರಾಗಿ ಕರ್ತವ್ಯ ನಿರ್ವಹಿಸದ ಇಲಾಖೆಯೇ ಇಲ್ಲವೆನ್ನುವಂತೆ ಸುಮಾರು ೪೦ವರ್ಷ ನಿಷ್ಠೆಯಿಂದ ದುಡಿದು ಪ್ರವೃತ್ತಿಯಿಂದ ಸಾಹಿತಿಯಾಗಿ ತಮ್ಮ ಒಂದೊಂದು ಕೃತಿಯಲ್ಲೂ ಒಂದೊಂದು ವಿಶೇಷಾಂಶವನ್ನಳವಡಿಸಿ ಸಾಹಿತ್ಯದೇವಿಗೆ ವಿಶಿಷ್ಟ ಸೇವೆ ಸಲ್ಲಿಸಿದ ನಾಗೇಗೌಡರದು ಜನಪದ ಸಂಸ್ಕೃತಿಯ ಉಳಿವಿಗಾಗಿ, ಬೆಳವಿಗಾಗಿ ತುಡಿಯುತ್ತಿರುವ ಜೀವ. ಓರ್ವ ಐ.ಎ.ಎಸ್. ಮಟ್ಟದ ಅಧಿಕಾರಿ ತನ್ನ ಅವಿರತ ಶ್ರಮ ಹಾಗೂ ನಿಷ್ಠೆಗಳಿಂದಾಗಿ ಆಡಳಿತ, ಸಾಹಿತ್ಯ, ಜಾನಪದ ಮುಂತಾದ ಕ್ಷೇತ್ರಗಳಲ್ಲಿ ಏನೇನು ಸಾಧಿಸಬಲ್ಲನೆಂಬುದಕ್ಕೆ ಗೌಡರು ಬಹುದೊಡ್ಡ ಉದಾಹರಣೆ"[೧] ಎಂಬ ಅಭಿಪ್ರಾಯದಲ್ಲಿ ಹುರುಳಿಲ್ಲದಿಲ್ಲ.

**ಸಾಹಿತ್ಯ ಸೇವೆ:-**

ಎಚ್.ಎಲ್.ನಾಗೇಗೌಡರು ಆಧುನಿಕ ಕನ್ನಡ ಸಾಹಿತ್ಯ, ಸೃಜನಶೀಲ ಸಾಹಿತ್ಯ ಮತ್ತು ಜನಪದ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಲೇಖಕರಲ್ಲಿ ಒಬ್ಬರು. ಜನಪರ ಸಾಮಾಗ್ರಿಗಳ ಸಂಗ್ರಹದ ಸಂಶೋಧಕರಾಗಿ ಕನ್ನಡ ನಾಡು-ನುಡಿಗೆ ಬಹುದೊಡ್ಡ ಕೊಡುಗೆ ನೀಡಿದ್ದಾರೆ. ಎಚ್.ಎಲ್.ನಾಗೇಗೌಡರ ಬಹುಮುಖ ಪ್ರತಿಭೆಯ ಸಾಹಿತ್ಯ ಕೃಷಿಯನ್ನು ಅನುವಾದ, ಜೀವನಚರಿತ್ರೆ, ಆತ್ಮಕಥೆ, ಕಥೆ, ಕಾದಂಬರಿ, ಕಾವ್ಯ ಪ್ರಬಂಧ, ಪ್ರವಾಸಕಥನ, ಮತ್ತು ಜಾನಪದ ಎಂದು ವಿಂಗಡಿಸಿಕೊಳ್ಳಬಹುದು. ಕನ್ನಡ ಸಾಹಿತ್ಯ ಲೋಕಕ್ಕೆ ಅನುವಾದಕರಾಗಿ ಕಾಲಿಟ್ಟರೂ

---

೧.ನಾಗಸಂಪದ ಶ್ರೀ ಎಚ್.ಎಲ್.ನಾಗೇಗೌಡರು ಜೀವನ ಮತ್ತು ಸಾಧನೆ. ಸಂಪಾದಕ ಚಕ್ಕೆರೆ ಶಿವಶಂಕರ್. ಕರ್ನಾಟಕ ಜಾನಪದ ಪರಿಷತ್ತು.

ವಿದ್ಯಾರ್ಥಿದಿಸೆಯಲ್ಲೇ ಕವನ ಬರೆಯುವುದನ್ನು ರೂಢಿಸಿಕೊಂಡಿದ್ದರು. 'ಸರ್ ವಾಲ್ಟರ್ ಸ್ಕಾಟ್' ಅವರ ಇಂಗ್ಲಿಷ್ ಕಾದಂಬರಿ 'ಕೆನಿಲ್‌ವರ್ಥ್' ಅನ್ನು ಅದೇ ಹೆಸರಿನಲ್ಲಿ ಕನ್ನಡದಲ್ಲಿ ಸಂಗ್ರಹಾನುವಾದವಾಗಿ ಪ್ರಕಟಿಸಿದ್ದಾರೆ.

ಐತಿಹಾಸಿಕ ಕಾದಂಬರಿಯಾದ 'ಕೆನಿಲ್‌ವರ್ಥ್' ಇಂಗ್ಲಂಡಿನ ರಾಣಿ ಒಂದನೇ ಎಲಿಜಬೆತ್‌ಳ ಆಳ್ವಿಕೆಯಲ್ಲಿ ನಡೆದ ಘಟನೆಗಳನ್ನು ಆಧರಿಸಿದೆ. ಐತಿಹಾಸಿಕ ಮತ್ತು ಕಾಲ್ಪನಿಕ ಅಂಶಗಳಿಂದ ಕೂಡಿರುವ ಈ ಕಾದಂಬರಿ ಇಂಗ್ಲೆಂಡಿನ ಹದಿನಾರರಿಂದ ಹದಿನೆಂಟನೆಯ ಶತಮಾನದ ಜನತೆಯ ಸಂಪ್ರದಾಯ, ಆಚಾರ-ವಿಚಾರ, ನಂಬಿಕೆ, ಮೂಢನಂಬಿಕೆ ಇತ್ಯಾದಿಗಳನ್ನು ಒಳಗೊಂಡ ಜೀವನ ಸಂಸ್ಕೃತಿಗಳನ್ನು ಚಿತ್ರಿಸುತ್ತದೆ.

ಮಾರ್ಕೊಪೋಲೋ ಪ್ರವಾಸ ಕಥನ ೧೯೫೬ರಲ್ಲಿ ಪ್ರಕಟವಾಗಿದೆ. ಮಧ್ಯಏಷ್ಯಾದ ಅನೇಕ ಭಾಗಗಳ ಬಗ್ಗೆ ವಿಸ್ತಾರವಾದ ಚೀನಾ ಸಾಮ್ರಾಜ್ಯದ ಬಗ್ಗೆ ಮಾರ್ಕೊಪೋಲೋ ಎಂಬ ಪ್ರವಾಸಿಯ ಪ್ರವಾಸ ಕಥನದ ಸಂಗ್ರಹಾನುವಾದವಾಗಿದೆ. ಇದು ಕನ್ನಡ ಪ್ರವಾಸ ಸಾಹಿತ್ಯ ಭಂಡಾರಕ್ಕೆ ನಾಗೇಗೌಡರು ಕೊಟ್ಟ ಅತ್ಯುತ್ತಮ ಕೊಡುಗೆ.

ವೆರಿಯರ್ ಎಲ್ವಿನರ ಗಿರಿಜನ ಪ್ರಪಂಚ ೧೯೬೫ರಲ್ಲಿ ಪ್ರಕಟವಾಯ್ತು. ಇದು ಅವರು ಅನುವಾದ ಮಾಡಿದ ಮತ್ತೊಂದು ಮಹತ್ವದ ಕೃತಿ. ಎಲ್ವಿನರು ಇಂಗ್ಲೆಂಡಿನಲ್ಲಿ ೧೯೦೨ರಲ್ಲಿ ಹುಟ್ಟಿ ಭಾರತಕ್ಕೆ ಪಾದ್ರಿಯಾಗಿ ಬಂದು ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಭಾರತೀಯ ಸಂಸ್ಕೃತಿಗೆ ಮನಸೋತು ಭಾರತೀಯ ಗಿರಿಜನರ ಬದುಕಿನ ಅಧ್ಯಾಯನ-ಉದ್ಧಾರಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಗಿರಿಜನ ಕನ್ಯೆಯನ್ನೇ ಮದುವೆಯಾಗಿ ಭಾರತದ ಪೌರತ್ವವನ್ನು ಪಡೆದು ಇಲ್ಲಿಯೇ ನೆಲೆನಿಂತ ಎಲ್ವಿನರು ಮೊದಲಿಗೆ ಮಾನವತಾವಾದಿ, ನಂತರದಲ್ಲಿ ಮಾನವ ವಿಜ್ಞಾನಿ. ಅವರ ಆತ್ಮಚರಿತ್ರೆಯೇ The Tribal world of verrier Elvin. ಇಂತಹ ಮಹಾನ್ ವ್ಯಕ್ತಿಯ ಆತ್ಮಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸುವುದರ ಮುಖಾಂತರ ನಾಗೇಗೌಡರು ಮಾನವ ವಿಜ್ಞಾನ, ಜನಪದ, ಸಮಾಜ ವಿಜ್ಞಾನ ಕ್ಷೇತ್ರಗಳನ್ನು ಕನ್ನಡದಲ್ಲಿ ಅರಿಯಬಲ್ಲವರಿಗೆ ಮಹದುಪಕಾರ ಮಾಡಿದ್ದಾರೆ.

'ಪ್ರವಾಸಿ ಕಂಡ ಇಂಡಿಯಾ' ಇದರ ಎಂಟು ಬೃಹತ್ ಸಂಪುಟಗಳಲ್ಲಿ ನಾಗೇಗೌಡರು ಓದುಗರಿಗೆ ಸಾಹಿತಿಗಳಾಗಿ, ವಿಮರ್ಶಕರಾಗಿ, ಇತಿಹಾಸಕಾರರಾಗಿ ಮತ್ತು ಭಾಷಾಂತರಕಾರರಾಗಿ ಗೋಚರಿಸುತ್ತಾರೆ. ಅನಾದಿಕಾಲದಿಂದ ಜಗತ್ತಿನ ನಾನಾ ಮೂಲೆಗಳಿಂದ, ನಾನಾ ಕಾರಣಗಳಿಗಾಗಿ ಭಾರತಕ್ಕೆ ಪ್ರವಾಸಿಗರು ಬಂದು ತಾವು ಕಂಡುಂಡ ಅನುಭವಗಳನ್ನು ಬರಹದ ರೂಪದಲ್ಲಿರಿಸಿರುವ ಹಲವು ಕುತೂಹಲಕಾರಿ ಸಂಗತಿಗಳು ಇಲ್ಲಿವೆ.

**ಸೃಜನಶೀಲ ಕೃತಿಗಳು;-**

ನಾನಾಗುವೆ ಗೀಜುಗನ ಹಕ್ಕಿ – ಎಚ್.ಎಲ್.ನಾಗೇಗೌಡರ ಸ್ವರಚಿತ ಹಾಗೂ ಅನುಪಾದಿತ ಕವನಗಳ ಸಂಕಲನ. ವಸ್ತು, ದಾಟಿ, ಧೋರಣೆಗಳಲ್ಲಿ ಜನಪದ ಕಾವ್ಯಕ್ಕೆ ಹತ್ತಿರವಾದ ಕಾವ್ಯಗಳನ್ನು ಇಲ್ಲಿ ಹೆಚ್ಚಾಗಿಯೇ ಕಾಣಬಹುದು.

೧. ಕಥೆವ್ಯಥೆ – ಎಂಟು ನೀಳ್ಗವನಗಳುಳ್ಳ ಸಂಕಲನವಿದು. ಇವುಗಳಲ್ಲಿ ಕಥನಕವನ ಹಾಗೂ ಭಾವಗೀತಾತ್ಮಕವಾದವುಗಳೂ ಇವೆ.

೨. ಕಂಡುಕೇಳಿದ ಕಥೆಗಳು – ನಾಗೇಗೌಡರ ಮೊದಲ ಕಥಾಸಂಕಲನ. ಆಗಿ ಹೋದ ಘಟನೆಗಳನ್ನು ಆಧರಿಸಿ ರಚಿಸಿದ ಎಂಟು ಗ್ರಾಮೀಣ ಪರಿಸರದ ಕಥೆಗಳ ಸಂಕಲನವಿದು. ನಾಗೇಗೌಡರು ಅಲ್ಲಿ ಇಲ್ಲಿ ಕಂಡ ಅವರಿವರಿಂದ ಕೇಳಿದ ನಿಜ ಘಟನೆಗಳೇ ಸ್ವಲ್ಪ ಕಲ್ಪನೆಯೊಡನೆ ಇಲ್ಲಿ ಕಥೆಗಳಾಗಿವೆ.

೩. ಖೈದಿಗಳ ಕಥೆಗಳು – ಇದೊಂದು ವಿಶಿಷ್ಟ ಕೃತಿ. ಯಾವುದೋ ಸಂದರ್ಭ ಒತ್ತಡಗಳಿಗೆ ಮಣಿದು ಕಳ್ಳತನ, ದರೋಡೆ, ಅತ್ಯಾಚಾರ, ಕೊಲೆಗಳನ್ನು ಮಾಡಿ ಜೈಲುಸೇರಿದವರ ಕರುಣಾಜನಕ ಕೌತುಕಮಯ ಕಥೆಗಳ ಸಂಕಲನ.

೪. ದೊಡ್ಡಮನೆ – ಗುಣ-ಗಾತ್ರಗಳೆರಡರಲ್ಲಿಯೂ ಬೃಹತ್ತಾದ ಕಾದಂಬರಿ. ನಶಿಸುತ್ತಿರುವ ನಮ್ಮ ಸಂಸ್ಕೃತಿಯ ಚಿತ್ರವನ್ನು ಚಿತ್ರಿಸುವ ಪ್ರಾದೇಶಿಕ ಕಾದಂಬರಿಯಿದು. ಬಯಲು ಸೀಮೆಯ ರೈತಾಪಿ ಬದುಕಿನ ದುರಂತ ಚಿತ್ರಣ ಕಾದಂಬರಿಯಲ್ಲಿ ಹೆಪ್ಪುಗಟ್ಟಿದೆ.

೫. ಸೊನ್ನೆಯಿಂದ ಸೊನ್ನಗೆ – ಈ ಕೃತಿ ಜನಪದ ಕಥೆಯೊಂದರ ಎಳೆ ಹಿಡಿದು ಹುಟ್ಟಿಕೊಂಡದ್ದು. ಇದರ ಆಶಯ ಕೆಟ್ಟವರು ಕೊನೆಗೆ ಕೆಟ್ಟದನ್ನೇ ಅನುಭವಿಸುತ್ತಾರೆ ಎಂಬುದು.

೬. ಭೂಮಿಗೆ ಬಂದ ಗಂಧರ್ವ – ಸಂಗೀತ ಸಾಮ್ರಾಟ, ಭೈರವಿರಾಗಕ್ಕೆ ಹೆಸರಾದ ಕೆಂಪೇಗೌಡರನ್ನು ಕುರಿತ ಐತಿಹಾಸಿಕ ಕಾದಂಬರಿಯಿದು. ನಾಗೇಗೌಡರಿಗೆ ಭೈರವಿ ಕೆಂಪೇಗೌಡರ ಬಗ್ಗೆ ಅಪಾರ ಅಭಿಮಾನವಿದೆ ಪರಿಣಾಮವಾಗಿ ಆತನನ್ನು ಪವಾಡ ಪುರುಷನ ಮಟ್ಟಕ್ಕೇರಿಸಿದ್ದಾರೆ.

೭. ನನ್ನೂರು;- ನಾಗೇಗೌಡರ ಹುಟ್ಟೂರಾದ ಹೆರಗನಹಳ್ಳಿಯ ಕಳೆದುಹೋದ ಸಮುದಾಯದ ಬದುಕಿನ ಚಿತ್ರಣ. ನನ್ನೂರು ಒಂದು ಸಾಂಕೇತಿಕ ಅಷ್ಟೆ ಗ್ರಾಮೀಣ ಜೀವನದ ಅಪೂರ್ವ ಪರಿಚಯದ ಕೃತಿಯಿದು.

೮. ಬೆಟ್ಟದಿಂದ ಬಟ್ಟಲಿಗೆ – ಕಾಫಿಯ ಉಗಮ, ವಿಲಾಸ, ವ್ಯಾಪ್ತಿ, ವೈಶಿಷ್ಟ್ಯಗಳನ್ನು ಅಂಕಿ-ಅಂಶಗಳೂಡನೆ ಸರಳವಾಗಿ ನಿರೂಪಿಸುವ ಈ ಕೃತಿ ನಾಗೇಗೌಡರು ಕನ್ನಡ ಸಾಹಿತ್ಯಕ್ಕೆ ನೀಡಿದ ಅಪರೂಪದ ಕೊಡುಗೆ.

೯. ಸರೋಜಿನಿ ದೇವಿ – ಭಾರತದ ಸ್ವಾತಂತ್ರ್ಯ ಹೋರಾಟಗಾರ್ತಿ ಕಾಂಗ್ರೇಸ್ ಅಧಿವೇಶನದ ಅಧ್ಯಕ್ಷತೆ ವಹಿಸಿದ್ದ ಭಾರತದ ಪ್ರಥಮ ಸ್ತ್ರೀ, ಪ್ರಸಿದ್ದ ಕವಯಿತ್ರಿ, ಭಾರತದ ಕೋಗಿಲೆ ಸರೋಜಿನಿದೇವಿಯವರನ್ನು ಕುರಿತು ನಾಗೇಗೌಡರು ಜರೆದ ಜೀವನ ಚರಿತ್ರೆಯೇ ಇದಾಗಿದೆ.

೧೦. ನಾ ಕಂಡ ಪ್ರಪಂಚ – ಇದು ನಾಗೇಗೌಡರು ಪ್ರವಾಸ ಮಾಡಿದ ಸಿಂಹಳ, ಹಾಂಕಾಂಗ್, ಮಲೇಶಿಯಾ, ಸಿಂಗಾಪುರ, ಥೈಲ್ಯಾಂಡ್, ಜಪಾನ್, ಬ್ರಿಟನ್, ಅಮೇರಿಕ ದೇಶಗಳ ಪ್ರವಾಸ ಕಥನವಾಗಿದೆ.

**ಜಾನಪದ;–**

ಜಾನಪದ ಕ್ಷೇತ್ರದಲ್ಲಿ ಎಚ್.ಎಲ್.ನಾಗೇಗೌಡರನ್ನು ಗುರುತಿಸಲೇಬೇಕು. ಇವರ ಮತ್ತೊಂದು ಆಸಕ್ತ ಕ್ಷೇತ್ರ ಜಾನಪದ. ಕನ್ನಡ ಜಾನಪದ ಕ್ಷೇತ್ರಕ್ಕೆ ಅವರು ಸಲಿಸಿರುವ ಸೇವೆ ಅವಿಸ್ಮರಣೀಯವಾದುದು. ಸಾಂಸ್ಥಿಕವಾಗಿ, ಸಾಹಿತ್ಯಿಕವಾಗಿ, ಸಾಂಘಿಕವಾಗಿ ಜಾನಪದಕ್ಕೆ ಅವರು ನೀಡಿರುವ ಕೊಡುಗೆ ಅತ್ಯಂತ ಅಮೂಲ್ಯವಾದುದು. ಆದ್ದರಿಂದಲೇ ಜಿ.ಎಸ್. ಸಿದ್ದಲಿಂಗಯ್ಯ ಇವರನ್ನು 'ಜಾನಪದ ಬ್ರಹ್ಮ' ಎಂದಿದ್ದಾರೆ.

ಗೌಡರ ಸಾಹಿತ್ಯ ಹಾಗೂ ಸಂಸ್ಕೃತಿಗಳ ಬಗ್ಗೆ ಅದರಲ್ಲೂ ಜನಪದ ಸಾಹಿತ್ಯದ ಬಗ್ಗೆ ಇದ್ದ ಅಪಾರ ಒಲವನ್ನು ಗುರುತಿಸಿದ ಅಂದಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಜಿ.ನಾರಾಯಣರವರು, ಶ್ರೀಮಾನ್ ನಾಗೇಗೌಡರನ್ನು, ಶ್ರೀ ಗೊ.ರು. ಚೆನ್ನಬಸಪ್ಪರವರನ್ನು ತಮ್ಮ ಆಪ್ತವಲಯಕ್ಕೆ ಸೆಳೆದುಕೊಂಡು ಸಾಹಿತ್ಯ ಪರಿಷತ್ತಿನ ಕಾರ್ಯಚಟುವಟಿಕೆಗಳಲ್ಲಿ ಜನಪದ ಸಾಹಿತ್ಯಕ್ಕೂ ಸ್ಥಾನಮಾನ ಒದಗಿಸಿಕೊಟ್ಟರು. ಅಂದು ಜನಪದ ಸಾಹಿತ್ಯವು ಪರಿಷತ್ತಿನ ನಡುಮನೆಯನ್ನು ಪ್ರವೇಶಿಸಿರಲಿಲ್ಲ. ಅದು ತಲೆಬಾಗಿಲಿನಾಚೆ ಬಹುಶಃ ಅಂದರೆ ಒಳಗಡೆ ದನದ ಕೊಟ್ಟಿಗೆಯಲ್ಲಿ ಕಾಲಹಾಕಬೇಕಾಗಿತ್ತು. ಜನಪದ ಸಾಹಿತ್ಯದ ಮಲ್ಲಿಗೆಯ ಪರಿಮಳವನ್ನು ಆಘ್ರಾಣಿಸುತ್ತಾ ಆ ಪರಿಮಳಕ್ಕೆ ಮನಸೋತವರು ಶಿಷ್ಟ ಸಾಹಿತ್ಯಗಳಲ್ಲೂ ಕೆಲವರು ಇದ್ದರು. ಅದು ಹೊಲೆಮಾದಿಗರ ಹಟ್ಟಿಯಲ್ಲಿ ಹುಟ್ಟಿದ್ದೆಂದೋ ಅಥವಾ ಶೂದ್ರರು ಮುಟ್ಟದ್ದೆಂದೋ ಮಡಿವಂತ ಸಾಹಿತಿಗಳು ಭಾವಿಸಿದ ಕಾಲ ಒಂದಿತ್ತು. ಕನ್ನಡ ಸಾಹಿತ್ಯಸಮ್ಮೇಳನಗಳಲ್ಲಿ ಜನಪದ ಸಾಹಿತ್ಯ ಚರ್ಚೆಯ ವಿಷಯವಾಗುತ್ತಿದ್ದುದು ಅಪ್ಪಕಪ್ಪೆ. ಹೀಗಿರುವಾಗ ಜನಪದ ಸಾಹಿತ್ಯ ಪ್ರೇಮಿಯಾಗಿದ್ದ ಗೊ.ರು.ಚನ್ನಬಸಪ್ಪ ಹಾಗೂ ಜಿ.ನಾರಾಯಣ ಅವರ ಸುಪ್ತ ಮನಸ್ಸಿನಲ್ಲಿಯೇ ಇದ್ದುಕೊಂಡು ಹೊರಬರಲು ಚಡಪಡಿಸುತ್ತಿದ್ದ ಜನಪದ ಸಾಹಿತ್ಯಪ್ರೇಮ ಪ್ರಕಟವಾಗಲು ಅನುವುಮಾಡಿಕೊಟ್ಟಿತು.

ನಾಗೇಗೌಡರು ರಾಜ್ಯದ ಎಲ್ಲಾ ಜಿಲ್ಲೆಗಳ ಜನಪದ ಹಾಗೂ ಜನಪದ ಕಲೆಗಳ ಪರಿಚಯ ಮಾಡಿಕೊಂಡರು. ತರೀಕೆರೆಯಲ್ಲಿ ನಡೆದ ಪ್ರಥಮ ಜಾನಪದ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಎರಡನೆಯದು ಮಂಗಳೂರಿನಲ್ಲಿ ನಡಿಯಿತು. ಮೂರನೆಯ ಜನಪದ ಸಮ್ಮೇಳನವನ್ನು ನಾಗಮಂಗಲದಲ್ಲಿ ಮೂರು ದಿನಗಳ ಕಾಲ ಅದ್ದೂರಿಯಾಗಿ ನಡೆಸಿದರು.

ಸಂಘಸಂಸ್ಥೆಗಳ ಮೂಲಕ ಜಾನಪದ ಚಟುವಟಿಕೆಗಳಿಗೆ ಪ್ರೇರಕರಾಗಿನಿಂತ ನಾಗೇಗೌಡರು ಅತ್ಯುತ್ತಮ ಜಾನಪದ ಸಂಗ್ರಾಹಕ ಸಂಶೋಧಕರಾಗಿ ಹೆಸರಾಗಿದ್ದಾರೆ.

೧. ಸೋಬಾನೆ ಚಿಕ್ಕಮ್ಮನ ಪದಗಳು – ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಈ ಕೃತಿಯನ್ನು ನಾಗೇಗೌಡರು ಸಂಗ್ರಹಿಸಿದ್ದಾರೆ. ಆ ಮೂಲಕ ತಮ್ಮೂರಾದ ಹೆರಗನಹಳ್ಳಿಯ ಸೋಬಾನೆ ಚಿಕ್ಕಮ್ಮನಂಥ ಪ್ರತಿಭಾವಂತ ಜಾನಪದ ಕಲಾವಿದೆಯೊಬ್ಬಳನ್ನು ಉಳಿಸಿಕೊಟ್ಟಿದ್ದಾರೆ.

೨. ಪದವವೆ ನಮ್ಮ ಎದೆಯಲ್ಲಿ – ಸೋಬಾನೆ ಪದಗಳು, ಒಸಗೆ ಪದಗಳು, ಹಚ್ಚೆಹೊಯ್ಯುವ ಪದಗಳು ಮೊದಲಾದ ಪ್ರಕಾರಗಳಿಂದ ಕೂಡಿರುವ ಗೀತಸಂಕಲನ.

೩. ಕರ್ನಾಟಕದ ಜನಪದ ಕಥೆಗಳು – ೧೯೭೧ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿಗಾಗಿ ಗೌಡರು ಸಂಪಾದಿಸಿಕೊಟ್ಟ ಕೃತಿಯಾಗಿದ್ದು, ಆಗಿನಕಾಲಕ್ಕೆ ಕರ್ನಾಟಕದಲ್ಲಿದ್ದ ೧೯ ಜಿಲ್ಲೆಗಳನ್ನು ಪ್ರತಿನಿಧಿಸುವ ಸುಮಾರು ೧೦೦ ಕಥೆಗಳಿರುವ ಸಂಕಲನ ಕೃತಿ.

೪. ಹೆಳವರು ಮತ್ತು ಅವರ ಕಾವ್ಯಗಳು – ಹೆಳವರು ಮತ್ತು ಅವರ ಕುಲಗಳ ಮೂಲ ಹಾಗೂ ಅವರು ಹಾಡುವ ಕಾವ್ಯಗಳನ್ನು ವಿಸ್ತಾರವಾಗಿ ನಿರೂಪಿಸುವ ಕೃತಿ.

೫. ಎಸೆನ್ಷಿಯಲ್ಸ್ ಆಫ್ ಕರ್ನಾಟಕ ಫೋಕ್ ಲೋರ್ – ಸಮಗ್ರ ಕರ್ನಾಟಕ ಜಾನಪದವನ್ನು ಸ್ಥೂಲವಾಗಿ ಪರಿಚಯಿಸುವ ಈ ಕೃತಿಯನ್ನು ಇಂಗ್ಲಿಷ್ ವಿಶ್ರಾಂತ ಪ್ರಾಧ್ಯಾಪಕರಾದ ಎಚ್.ಎಂ.ರಾಮಕೃಷ್ಣ ಅವರೊಂದಿಗೆ ಸೇರಿ ರಚಿಸಿದ್ದಾರೆ.

೬. ಕನ್ನಡ ಜಾನಪದ ಕೋಶ – ಜಾನಪದಕ್ಕೆ ಮೀಸಲಾದ ಶಬ್ದಾರ್ಥ ನಿಘಂಟು ಇದು ನಾಗೇಗೌಡರ ಪ್ರದಾನ ಸಂಪಾದಕತ್ವದಲ್ಲಿ ಹೊರಬಂದಿದೆ.

ಜನಪದ ಸಾಹಿತ್ಯ ಸಂಗೀತದ ಧ್ವನಿಮುದ್ರಣ – ಕರ್ನಾಟಕ ಜಾನಪಸ ಟ್ರಸ್ಟ್, ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸ್ಥಾಪನೆ ಇತ್ಯಾದಿ ನಾಗೇಗೌಡರ ಸಾಧನೆಗಳು.

ಜಾನಪದ ಲೋಕ – ಬೆಂಗಳೂರು–ಮೈಸೂರು ಹೆದ್ದಾರಿಯ ರಾಮನಗರ ಬಳಿ ಸುಮಾರು ೧೫ ಎಕರೆ ಪ್ರದೇಶದಲ್ಲಿ ಸ್ಥಾಪಿತವಾಗಿರುವ ಅತ್ಯಂತ ಮಹತ್ವದ ಸಾಂಸ್ಕೃತಿಕ ಕೇಂದ್ರವಾಗಿದೆ.ಜನಪದರ ಸಾಮಾಜಿಕ, ಧಾರ್ಮಿಕ ಸಂಬಂಧಗಳನ್ನು ಉಳಿಸಿಕೊಂಡು ಆಧುನಿಕ ಸಂದರ್ಭದಲ್ಲೂ, ಬದುಕು ಉಲ್ಲಾಸದಿಂದ ಕೂಡಿರುವಂತೆ ನೋಡಿಕೊಳ್ಳುತ್ತಿರುವುದು ಜಾನಪದ ಲೋಕದ ಉದ್ದೇಶವಾಗಿದೆ.

**ಸಂದ ಗೌರವಗಳು** – ನಾಗೇಗೌಡರು ಸಾಹಿತ್ಯ ಮತ್ತು ಜಾನಪದ ಕ್ಷೇತ್ರದಲ್ಲಿ ಸಲ್ಲಿಸಿರುವ ಅಮೋಘ ಸೇವೆಗಾಗಿ ಹತ್ತು ಹಲವು ಪ್ರಶಸ್ತಿಗಳು ಅವರನ್ನು ಹುಡುಕಿಕೊಂಡು ಬಂದಿವೆ. ನಾಡಿನ ಸಂಘಸಂಸ್ಥೆಗಳು ಮತ್ತು ಸರ್ಕಾರ ಅವರನ್ನು ಸನ್ಮಾನಿಸಿ ಗೌರವಿಸಿವೆ.

೧೯೭೪ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

೧೯೮೮ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ.

೧೯೯೦ರಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ

೧೯೯೨ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಫೆಲೋಶಿಫ್.

೧೯೯೯ರಲ್ಲಿ ಜಾನಪದ ಮೇರು, ಪ್ರೇರಣಾ ಪ್ರಶಸ್ತಿ

೨೦೦೨ರಲ್ಲಿ ಸಂದೇಶ ಸಾಹಿತ್ಯ ಪ್ರಶಸ್ತಿ

೨೦೦೩ರಲ್ಲಿ ಚುಂಚಶ್ರೀ ಪ್ರಶಸ್ತಿ

೨೦೦೪ರಲ್ಲಿ ಪಂಪ ಪ್ರಶಸ್ತಿ

'ನಾಗಸಿರಿ' ಎಂಬುದು ಅವರ 'ಆತ್ಮಕಥೆ'. ನಾಗೇಗೌಡರು ಒಬ್ಬ ವ್ಯಕ್ತಿಯಲ್ಲ, ಸಂಸ್ಥೆ. ಒಂದು ಸಂಸ್ಥೆ ಮಾಡವಂಥದ್ದನ್ನು ಒಬ್ಬ ವ್ಯಕ್ತಿ ಮಾಡಿರುವುದು ಅಚ್ಚರಿಯ ಸಂಗತಿಯೇ ಸರಿ. "ನಾಗೇಗೌಡರು ಬಹುಮುಖ ಪ್ರತಿಭೆಯುಳ್ಳ ವ್ಯಕ್ತಿ ಇವರ ಸಾಧನೆ ಬಹುಮುಖವಾದದ್ದು. ಒಂದು ಕೈಯಲ್ಲಿ ಆಡಳಿತ ಸೂತ್ರವನ್ನು ಮತ್ತೊಂದು ಕೈಯಲ್ಲಿ ಲೇಖನಿಯನ್ನು ಹಿಡಿದು ಶ್ರೀ ಸಾಮಾನ್ಯರ ಮತ್ತು ಸಾಹಿತ್ಯ ಸಂಸ್ಕೃತಿಯ ಸೇವೆಯನ್ನು ಸಮರ್ಥವಾಗಿ ನಿರ್ವಹಿಸಿದವರು".[೧] ಎಂಬ ಹೆಗ್ಗಳಿಕೆಯ ಮಾತುಗಳು ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿದೆ.

---

೧.ಸಾಲುದೀಪಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಮೂರನೆಯ ಮುದ್ರಣ ೨೦೦೧ ಸಂಪಾದಕರು ಜಿ.ಎಸ್.ಸಿದ್ದಲಿಂಗಯ್ಯ, ಎಂ.ಎಚ್.ಕೃಷ್ಣಯ್ಯ, ಎಚ್.ಎಲ್.ನಾಗೇಗೌಡ ಚಕ್ಕರೆ ಶಿವಶಂಕರ್ ಅವರ ಲೇಖನ.

## ಅಧ್ಯಾಯ – ೪

# ಕಾದಂಬರಿ ವಸ್ತುವಿಶ್ಲೇಷಣೆ

**ದೊಡ್ಡಮನೆ:-**

ಗ್ರಾಮೀಣ ಬದುಕಿನ ಸಿತ್ಯಂತರಗಳ ದಾಖಲಾತಿ ಹಾಗೂ ನಶಿಸುತ್ತಿರುವ ಜನಪದ ಸಂಸ್ಕೃತಿಯ ಚಿತ್ರವನ್ನು 'ದೊಡ್ಡಮನೆ' ಕಾದಂಬರಿ ಚಿತ್ರಸುತ್ತದೆ. ದಾಯಾದಿ ಮಾತ್ಸರ್ಯಕ್ಕೆ ಸಿಕ್ಕಿ ಉನ್ನತವಾಗಿ ಬಾಳುತ್ತಿದ್ದ ಕುಟುಂಬವೊಂದು ಅವನತಿಯ ಹಂತವನ್ನು ತಲುಪುವುದಕ್ಕೆ ಸಂಬಂಧಿಸಿದ ಕಥೆಯನ್ನು ಈ ಕಾದಂಬರಿ ಒಳಗೊಂಡಿದೆ. "ಹುಟ್ಟುತ್ತಾ ಅಣ್ಣ ತಮ್ಮಂದಿರು ಬೆಳೀತಾ ದಾಯಾದಿಗಳು" ಎಂಬ ಗಾದೆ ಮಾತು ಈ ಕಾದಂಬರಿಗೆ ಅನ್ವಯಿಸುತ್ತದೆ.

ನನ್ನೂರಿನ ದೊಡ್ಡಮನೆ ನಂಜೇಗೌಡರು ತುಂಬಾ ದೊಡ್ಡ ಗುಣವುಳ್ಳ ವ್ಯಕ್ತಿ. ಜೊತೆಗೆ ಅವಿಭಕ್ತ ದೊಡ್ಡಸಂಸಾರ ಸುತ್ತ-ಮುತ್ತೆಲ್ಲ ದೊಡ್ಡಮನೆ ಎಂಬ ಗೌರವವನ್ನು ಸಂಪಾದಿಸಿಕೊಂಡಿದೆ. ಇದನ್ನು ನಂಜೇಗೌಡರ ದಾಯಾದಿ ಮುದ್ದೇಗೌಡ ಸಹಿಸುವುದಿಲ್ಲ. 'ದೊಡ್ಡಮನೆ' ಚಿಕ್ಕಮನೆಯಾಗಬೇಕೆಂದು ಹಗಲಿರುಳು ಬಯಸುತ್ತಾರೆ. ಅದಕ್ಕಾಗಿ ಹಲವಾರು ರೀತಿಯ ಪ್ರಯತ್ನಗಳನ್ನು ಮಾಡುತ್ತಾರೆ. ಯಾವುದೋ ಒಂದು ಒಳ್ಳೆಯ ಸಮಯದಲ್ಲಿ ನಂಜೇಗೌಡರು ಮುದ್ದೇಗೌಡರನ್ನು ಬೇಡಿಕೊಂಡು ಇಂತಹ ಕಹಿ ಹಾಗೂ ವಿಷಭಾವನೆಯನ್ನು ತೊಡೆದು ಹಾಕಿದರು. ಇವರಿಬ್ಬರು ಕಾಲವಾದ ನಂತರ ಬಂದ ಮಕ್ಕಳಲ್ಲಿ ಈ ವಿಷಭಾವನೆ ತಾನೇ ತಾನಾಗಿ ಹರಿಯತೊಡಗಿತು.

ನಂಜೇಗೌಡನ ಮಗ ಲಿಂಗೇಗೌಡ ದೊಡ್ಡ ವ್ಯಕ್ತಿತ್ವ ಉಳ್ಳವನಾಗಿ ಸುತ್ತಮುತ್ತೆಲ್ಲ ಹೆಸರುವಾಸಿಯಾದ. ಮುದ್ದೇಗೌಡರ ಮಗ ರಂಗೇಗೌಡ ಅಸೂಯೆ ಮತ್ತು ಕೀಳುತನದಿಂದಾಗಿ ನನ್ನೂರಿನ ಜನರಿಗೂ, ಮುಖ್ಯವಾಗಿ ದೊಡ್ಡಮನೆ ಲಿಂಗೇಗೌಡರಿಗೂ ಪೀಡಕನಾಗುತ್ತಾನೆ. ಲಿಂಗೇಗೌಡರು ಊರಿಗೆ ಹಲವಾರು ರೀತಿಯ ಅನುಕೂಲಗಳನ್ನು ಮಾಡುತ್ತಾರೆ. ಸೇಂದಿ ಬಾಬು ಮಾಡಿ ದೊಡ್ಡಮನೆಯ ದೊಡ್ಡ ಖರ್ಚನ್ನು ಸರಿದೂಗಿಸಲು ಪ್ರಯತ್ನಿಸುತ್ತಾರೆ. ಆಲಮನೆ ಮಾಡುತ್ತಾರೆ. ಹೊಸಮನೆ ಕಟ್ಟಿಸುತ್ತಾರೆ. ಲಿಂಗೇಗೌಡರಿಗೆ ಮೊದಲಿನ ಮಗ ನಾಗು. ಕಾದಂಬರಿಯ ನಿರೂಪಕ, ತಾಯಿಯನ್ನು ಕಳೆದುಕೊಂಡ ತಬ್ಬಲಿ ಅಜ್ಜಿಯ ಹಾರೈಕೆಯಲ್ಲಿ ಬೆಳೆಯುತ್ತಾನೆ.

ಕೊನೆಗೆ ರಂಗೇಗೌಡನು ಲಿಂಗೇಗೌಡರ ಮನೆ ಮುರಿಯಲು ಲಿಂಗೇಗೌಡರ ತಮ್ಮ ಕೆಂಗಣ್ಣನನ್ನು ಅಸ್ತ್ರವನ್ನಾಗಿ ಮಾಡಿಕೊಳ್ಳುತ್ತಾನೆ. ರಂಗೇಗೌಡನ ಹಲವು ಪಿತೂರಿಗಳಿಂದ ದೊಡ್ಡಮನೆ ಒಡೆದು ಚಿಕ್ಕ

ಮನೆಯಾಗುತ್ತದೆ. ಲಿಂಗೇಗೌಡ ಇದನ್ನು ತಪ್ಪಿಸಲು ಹಲವು ರೀತಿಯಲ್ಲಿ ಹಂಬಲಿಸುತ್ತಾನೆ. ಆದರೆ ದೊಡ್ಡಮನೆಯು ಒಡೆದು ಹೋಗುತ್ತದೆ. ಇದಕ್ಕೂ ಮೊದಲೇ ಲಿಂಗೇಗೌಡ ಮತ್ತು ರಂಗೇಗೌಡ ಇವರಿಬ್ಬರ ಮೇಲೆ ಚಿಕ್ಕಪ್ಪನ ಕೊಲೆಯ ಆಪಾದನೆ ಬರುತ್ತದೆ. ಲಿಂಗೇಗೌಡನ ಮಗ ನಾಗು ದೊಡ್ಡ ಅಧಿಕಾರಿಯಾಗುತ್ತಾನೆ. ಕೊನೆಗೆ ದೊಡ್ಡಮನೆಯ ಘನತೆ ಗೌರವಗಳನ್ನು ಆತ ಎತ್ತಿಹಿಡಿಯುತ್ತಾನೆ ಎಂಬ ಆಶಾಭಾವನೆಯಿಂದ ಕಾದಂಬರಿ ಕೊನೆಯಾಗುತ್ತದೆ.

ಹೀಗೆ ಮೂರು ತಲೆಮಾರುಗಳ ಜೀವನವನ್ನು ವಿಸ್ತಾರವಾಗಿ ಚಿತ್ರಿಸ ಹೊರಟಿರುವ ಈ ಕಾದಂಬರಿಯ ಧೀರ್ಘವರ್ಣನೆ ಮತ್ತು ಆಳ-ಅಗಲಗಳ ನಿರೂಪಣೆಯಲ್ಲಿ ನಿರ್ಲಿಪ್ತತೆಯ ಜೊತೆಗೆ ಸಂಯಮವಿದೆ. ಇಂಥ ಸಂಯಮಪೂರ್ಣವಾದ ಬರವಣಿಗೆ ಈ ತರಹ ವಸ್ತುವನ್ನಾರಿಸಿಕೊಂಡಾಗ ಅಗತ್ಯವೂ ಆಗುತ್ತದೆ. ಪ್ರಾರಂಭದಲ್ಲಿ ಮಂದಗತಿಯಲ್ಲಿ ಸಾಗುವ ಈ ಕಾದಂಬರಿ ಬರಬರುತ್ತಾ ತನ್ನ ವೇಗವನ್ನು ಹೆಚ್ಚಿಸಿಕೊಂಡು ಕೊನೆ ಕೊನೆಗೆ ಅತಿಕ್ಷಿಪ್ರದಲ್ಲಿ ಮುಕ್ತಾಯವಾಗುತ್ತದೆ. ಮೂರು ತಲೆಮಾರುಗಳ ಜೀವನವನ್ನು ಚಿತ್ರಿಸಬೇಕೆಂದಿರುವ ಈ ಕಾದಂಬರಿ ತಲೆಮಾರಿನ ಪ್ರಕಾರ ವಿವರಗಳು ಸಿಗುವುದಿಲ್ಲ.

ಈ ಕಾದಂಬರಿಯು ಅವಸಾನವಾಗುತ್ತಿರುವ ನಮ್ಮ ಸಂಸ್ಕೃತಿಯ ಚಿತ್ರವನ್ನು ನೀಡುವ ಕೆಲವೇ ಪ್ರಾದೇಶಿಕ ಕಾದಂಬರಿಗಳಲ್ಲಿ ಒಂದು. ಮರಳಿಮಣ್ಣಿಗೆ, ಗ್ರಾಮಾಯಣದಂಥ ಕಾದಂಬರಿಗಳ ಸಾಲಿಗೆ ಇದು ಸೇರುತ್ತದೆ ಎನ್ನಬಹುದು. "ಮೈಸೂರು, ಮಂಡ್ಯ ಜಿಲ್ಲೆಗಳ ಬಯಲುಸೀಮೆಯ ಒಕ್ಕಲುಮಕ್ಕಳ ಬಾಳಿನ ವಿವರಗಳನ್ನು ಈ ಕಾದಂಬರಿ ಚಿತ್ರಿಸಿದೆ. ಹಾಗೆಂದಾಕ್ಷಣ ಬದುಕನ್ನು ಬಹಳ ಗಂಭೀರವಾಗಿ ಪರಿಗಣಿಸಿದ ಕಾದಂಬರಿಗಳು ಇಲ್ಲವೆಂದಲ್ಲ ಬದುಕಿನ ಯಾವುದೋ ಅಂಶವನ್ನು ಕುರಿತಂತೆ ಬರೆದ ಕಾದಂಬರಿಗಳಿವೆಯೇ ಹೊರತು ಎಲ್ಲಾ ಅಂಶಗಳನ್ನು ಮುಖ್ಯವಾಗಿ ರೀತಿ-ನೀತಿ, ಆಚಾರ-ವಿಚಾರಗಳನ್ನು, ಕಂಡದ್ದನ್ನು ಕಂಡಹಾಗೆ ಮುಂದಿಡುವ ಕಾದಂಬರಿಗಳು ವಿರಳ"[೧] ಎಂಬ ಅಭಿಪ್ರಾಯ ಸಮ್ಮತವಾದುದಾಗಿದೆ.

ದೊಡ್ಡಮನೆ ಕಾದಂಬರಿ ಶಿಥಿಲವಾಗುತ್ತಿರುವ ನಮ್ಮ ಕೌಟುಂಬಿಕ ವ್ಯವಸ್ಥೆಯ ಕರಾಳ ಚಿತ್ರವನ್ನು ಕೊಡುತ್ತದೆ. ಅಂದರೆ ಅವಿಭಕ್ತ ಕುಟುಂಬವೊಂದು ಒಡೆದು ಪಾಲಾಗುವುದು ಈ ಕಾದಂಬರಿಯ ವಸ್ತು. 'ನನಗಾಗಿ ಎಲ್ಲರೂ ಎಲ್ಲರಿಗಾಗಿ ನಾನು', ಎಂಬ ಸಾಮೂಹಿಕ ಹಿತದೃಷ್ಟಿಯ ತಿಳಿವಳಿಕೆಯಿಂದ ಬದ್ಧವಾದ ಸಾಮಾಜಿಕ ವ್ಯವಸ್ಥೆಯಲ್ಲಿ ವೈಯಕ್ತಿಕತೆ ತಲೆಹಾಕಿದಾಗ ಆಗುವ ಅನಾಹುತವನ್ನು

೧ ನಾಗವಲ್ಲಿ - ಶ್ರೀನಾಗೇಗೌಡರ ಗೌರವಗ್ರಂಥ ೧೯೭೭.ಸಂಪಾದಕರು ಡಾ.ಜೀ.ಸಂ.ಪ. ಹ.ಕ.ರಾಜೇಗೌಡ, ಪ್ರದಾನಗುರುಧತ್ತ. ಲೇಖನ-ದೊಡ್ಡಮನೆ-ಒಟ್ಟುನೋಟ.ರಂಗಾರೆಡ್ಡಿ ಕೋಡಿರಾಂಪುರ.

ಹಂತ-ಹಂತವಾಗಿ ಚಿತ್ರಿಸುತ್ತಾ ಈ ಕಾದಂಬರಿ ಸಾಗುತ್ತಾ ಕಾದಂಬರಿಕಾರರ ಸ್ವಂತ ಜೀವನವನ್ನೇ ಮೈವೆತ್ತ ಕೃತಿಯಂತೆ ಗೋಚರಿಸುತ್ತದೆ.

ಈ ಕಾದಂಬರಿಯ ವಸ್ತು ಸಾರ್ವಕಾಲಿಕ ಸತ್ಯಕ್ಕೆ ಸೇರಿದುದಾಗಿದೆ.ದಾಯಾದಿ ಮಾತ್ಸರ್ಯ ದೊಡ್ಡ ಮನೆಯನ್ನು ಒಡೆದು ಚೂರುಚೂರು ಮಾಡುತ್ತದೆ. ಈ ದಾಯಾದಿ ಮಾತ್ಸರ್ಯದ ಕಥೆಯನ್ನು ನಾವು ಕೇಳುತ್ತಲೇ ಬಂದಿದ್ದೇವೆ. ಮನುಷ್ಯನ ಕಾಲಕ್ಕೆ ಸಿಕ್ಕಿ ಬೇಯುವ ಜೀವಗಳ ಸೂಕ್ಷ್ಮ ಚಿತ್ರಣ ಕಾದಂಬರಿಯು ಬೆಳಗೊಂಡಿದೆ.

'ಮಣ್ಣಿನ ವಾಸನೆ' ಸಾಮಾಜಿಕಪ್ರಜ್ಞೆ, ಜನಸಾಮಾನ್ಯ ಬದುಕಿನ ಚಿತ್ರಣ, ಈ ಕಾದಂಬರಿಯಲ್ಲಿ ಹುದುಗಿರುವುದರ ಜೊತೆಗೆ, ಬಯಲುಸೀಮೆಯ ಆಡುನುಡಿಯ ಬಳಕೆ, ಜಾನಪದೀಯ ಆಯಾಮವೂ ಕೂಡ ಈ ಕಾದಂಬರಿಯು ಹೊಸತನದಿಂದ ವೈಶಿಷ್ಟ್ಯತೆಯನ್ನು ಗಳಿಸಲು ನೆರವಾಗಿವೆ ಎಂದು ಅಭಿಪ್ರಾಯಪಡಬಹುದು.

**'ಸೊನ್ನೆಯಿಂದ ಸೊನ್ನೆಗೆ' :-**

'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿಯ ಕಥೆ ಒಂದು ಐತಿಹ್ಯ. ಈಗಲೂ ದಟ್ಟವಾಗಿ ದಕ್ಷಿಣ ಕರ್ನಾಟಕದ ಎಲ್ಲ ಜನಪದದಲ್ಲಿ ಬಳಕೆಯಾಗುತ್ತಿದೆ. ಇದು ಎಚ್.ಎಲ್.ನಾಗೇಗೌಡರ ಎರಡನೆಯ ಕಾದಂಬರಿಯಾಗಿದ್ದು, ಗ್ರಾಮೀಣ ಬಾಳಿನ ಚಿತ್ರಣದಿಂದ ಕೂಡಿದೆ. ಮಂಡ್ಯದ ಸುತ್ತ-ಮುತ್ತಲ ಪ್ರದೇಶದ ಪರಿಸರದಲ್ಲಿ ಕಥೆ ಹೆಣೆದುಕೊಂಡು ಅರಳಿನಿಂತಿದೆ. ಕಥನಕ್ರಮ ಸನ್ನಿವೇಶ ನಿರ್ಮಾಣ, ಶೈಲಿ ಹಾಗೂ ಪರಿಣಾಮದ ದೃಷ್ಟಿಯಿಂದ ಮಹತ್ವ ಪಡೆದುಕೊಂಡಿದೆ. ಮಂಡ್ಯದ ಕಡೆಯವರಿಂದ ಕೇಳಿದ ಕಥೆಯಾದ್ದರಿಂದ ಅಲ್ಲಿನ ಪ್ರದೇಶದ ಪರಿಸರದಲ್ಲಿ ಈ ಕೃತಿಯನ್ನು ಬೆಳಸಿದ್ದಾರೆ.

ಬಯಲು ಸೀಮೆಯ ಗ್ರಾಮಾಂತರ ಪ್ರದೇಶದಲ್ಲಿ 'ನಿನ್ನಮನೆ ಧೂಪದ ಚನ್ನನ ಮನೆಯಂತಾಗ!' ಎಂಬ ಮಾತನ್ನು ಬಳಸಿ ಬಯ್ಯುತ್ತಾರೆ. ಈ 'ಧೂಪದ ಚನ್ನ'ಯಾರು? ಎಂದು ನಾನು ಅಲ್ಲಿ ಇಲ್ಲಿ ವಿಚಾರಿಸಿದಾಗ ಅದ್ಧೂರಿಯಾಗಿ ಬಾಳಿ ಬದುಕಿ ಕೊನೆಗೆ ನಿರ್ಗತಿಕನಾದ ಒಬ್ಬ ವ್ಯಕ್ತಿಯಾಗಿರಬೇಕು"... ಆತನೊಬ್ಬ ಐತಿಹಾಸಿಕ ವ್ಯಕ್ತಿಯಾಗಿರಬಹುದಾದ ಕಾರಣ[೧]... ಕಥೆಯನ್ನು ಶತಮಾನದಷ್ಟು ಹಿಂದಕ್ಕೆ ಸರಿಸಿ ಕಥಾನಾಯಕನಿಗೆ 'ಧೂಪದಚೆನ್ನ' ಎಂದು ಹೆಸರನ್ನು ಇರಿಸಿಕೊಂಡೆ ಎಂಬ ಮಾತುಗಳು ಕಾದಂಬರಿಯ ನಾಯಕನ ಪಾತ್ರವನ್ನು ಸ್ಪಷ್ಟಪಡಿಸುತ್ತವೆ.

೧.ಸೊನ್ನೆಯಿಂದ ಸೊನ್ನೆಗೆ. ಪರಿಷ್ಕೃತ ಮುದ್ರಣ ೧೯೭೭ರ ಪೀಠಿಕೆ – ಪುಟ

ಕಥೆಯ ತಿರುಳನ್ನು ಕೆಲವು ಸೂತ್ರಪ್ರಾಯವಾದ ಮಾತುಗಳಲ್ಲಿ ಹಿಡಿದಿಟ್ಟದ್ದಾರೆ. "ಮಾಡಿದ್ದುಣ್ಣೋ ಮರಾಯ" ಎಂಬ ಸೂಕ್ತಿ ಈ ಕಾದಂಬರಿಯಲ್ಲಿ ವ್ಯಕ್ತಗೊಂಡಿರುವುದನ್ನು ಅರಿಯಬಹುದು. ಬದುಕಿನಲ್ಲಿ ಬಡತನ–ಸಿರಿತನ ಶಾಶ್ವತವಲ್ಲ ಅದು ಬಂದುಹೋಗುವಂತದ್ದು. ಅದಾಗ್ಯೂ ಒಬ್ಬ ವ್ಯಕ್ತಿಯ ಶ್ರೀಮಂತಿಕೆಯ ಹಿಂದೆ ಅದೆಷ್ಟೋ ಜನರ ಬೆವರು, ನಿಟ್ಟುಸಿರು ಇರುತ್ತದೆ. ಅನ್ಯರ ನಿಟ್ಟುಸಿರಿನ ಫಲದಿಂದ ದೊರೆತ ಸಂಪತ್ತು ಒಂದಿಲ್ಲೊಂದು ದಿನ ಕೈತಪ್ಪಿ ಹೋಗಬಹುದು.

ಈ ತತ್ವದ ಬುನಾದಿಯ ಮೇಲೆ ಈ ಕಾದಂಬರಿ ನಿಂತಿದೆ. ಇನ್ನೊಂದು ನಾವು ಕಾಣುವ ಸತ್ಯ ಸಂಗತಿ ಇದೆ. ಅದೇನೆಂದರೆ ಬೆವರು ಸುರಿಸಿ ಯಾರೂ ಬಲ್ಲಿದನಾಗುವುದಿಲ್ಲ. ಶ್ರೀಮಂತಿಕೆ ದುಡಿಮೆಯಿಂದ ಬರುವುದಿಲ್ಲ ಎಂಬುದು"[೧]... ನಿರ್ಗತಿಕನಾಗಿ ಬಾಳಿ ಅಂತಿಮವಾಗಿ ದುರ್ವ್ಯಸನಕ್ಕಿಳಿದು ತನ್ನ ಎಲ್ಲಾ ಸಂಪತ್ತನ್ನು ಕಳೆದುಕೊಂಡು ಪೂರ್ವಸ್ಥಿತಿಗೆ ಮರಳಿದ ವ್ಯಕ್ತಿಯೊಬ್ಬನ ಬದುಕೇ ಈ ಕಾದಂಬರಿ ವಸ್ತು.

ಲೇಖಕರು ವಸ್ತುವನ್ನು ನಿರ್ವಹಿಸುವಲ್ಲಿ ಬಹಳ ಶ್ರಮವಹಿಸಿದ್ದಾರೆಂಬುದು ಅವರ ಮೊದಲ ಮಾತುಗಳಲ್ಲಿ ವ್ಯಕ್ತವಾಗುತ್ತದೆ.

ಈ ಕಾದಂಬರಿಯ ನಾಯಕ ಐತಿಹಾಸಿಕ ವ್ಯಕ್ತಿಯಾಗಿದ್ದಿರಬಹುದಾದ ಧೂಪದ ಚನ್ನೇಗೌಡ ಇವನ ಪೂರ್ವಿಕರು ಎಲ್ಲಿಂದಲೋ ಮೈಲಾರಕ್ಕೆ ಬಂದು ನೆಲೆಸಿದವರು.

ಧೂಪದ ಚನ್ನೇಗೌಡನ ತಾತನಾದ 'ಚನ್ನ ಮೈಲಾರದ ಚಾಜಗಾರ ಕುಳ'[೨] (ಊರಿನ ಅಣ್ಣ ತಮ್ಮತನಕ ಸೇರದೆ ಇದ್ದವನು ಎಂದರ್ಥ). ಇವನು ದೇವರ ದುಡ್ಡನ್ನು ತಿಂದು ಕಾಲಾನಂತರ ಸತ್ತುಹೋಗುತ್ತಾನೆ. ದೇವರ ದುಡ್ಡು ತಿಂದುದ್ದಕ್ಕೊ ಏನೋ ಕಾಕತಾಳೀಯವೆಂಬಂತೆ ಚನ್ನನ ಮೊದಲನೆಯ ಮಗ ಮೂಡ್ಲಪ್ಪ ಮೂಡ್ಲ ಸೀಮೆಗೆ ಹೋದವನು ಅಲ್ಲಿಯೇ ವಾಂತಿಭೇಧಿಯಾಗಿ ಸಾಯುತ್ತಾನೆ. ಎರಡನೆಯ ಮಗ ಕುರುಡನಾಗುತ್ತಾನೆ. ಮೂಡ್ಲಪ್ಪನ ಮಗನೇ ಈ ಕಾದಂಬರಿಯ ನಾಯಕ ಚನ್ನೇಗೌಡ. ಎಳೆವಯಸ್ಸಿನಲ್ಲಿಯೇ ಎಲ್ಲರನ್ನು ಕಳೆದುಕೊಂಡು ಹತ್ತು ವರ್ಷದವರಿಗೆ ತನ್ನ ಚಿಕ್ಕಪ್ಪ ಕುಂಡಪ್ಪನ ಆಶ್ರಯದಲ್ಲಿ ಹಾಗೂ ಹೀಗೂ ಬೆಳೆದು ಕಾಲಸಾಗಿಸುತ್ತಿರುವಾಗ ಕುಂಡಪ್ಪನೂ ಸಾಯುತ್ತಾನೆ. ಚನ್ನ ಅನಾಥನಾಗಿ ಅದೇ ಊರಿನ ಪರೋಪಕಾರಿಗಳಾಗಿದ್ದ ಮಲ್ಲೇಗೌಡರ ಮನೆಯಲ್ಲಿ ಬೆಳೆಯುತ್ತಾನೆ. ಮುಂದೆ ಮಲ್ಲೇಗೌಡರ ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದ ಚೌಡಿಯನ್ನು ಮದುವೆ ಮಾಡಿಕೊಂಡು ಎಷ್ಟೋ ವರ್ಷಗಳ ಹಿಂದೆ ಆರಿಹೋಗಿದ್ದ ತನ್ನ ಮನೆಯ ದೀಪ ಹಚ್ಚುತ್ತಾನೆ.

೧.ಸೊನ್ನೆಯಿಂದ ಸೊನ್ನೆಗೆ ಪೀಠಿಕೆ – ಪು೬

೨.ಸೊನ್ನೆಯಿಂದ ಸೊನ್ನೆಗೆ ಪು.೨೦.

ಒಕ್ಕಲುತನದ ಜೊತೆಗೆ ಸೌದೆ ಕಡಿದು ಮಾರುವುದು ತನ್ನ ಊರು ಮೈಲಾರದಿಂದ ಮೈಸೂರಿಗೆ ಬಾಡಿಗೆಗೆ ಗಾಡಿ ಹೊಡೆಯುವುದು, ಹುಣಸೇಹಣ್ಣು, ಅವರೇಕಾಳುಗಳನ್ನು ಮಾರುವುದು, ದನಕರುಗಳ ಮಾರಾಟ ಹೀಗೆ ಸಣ್ಣಪುಟ್ಟ ವ್ಯಾಪಾರ ವ್ಯವಹಾರದಿಂದ ನಾಲ್ಕು ಕಾಸು ಸಂಪಾದಿಸುತ್ತಾನೆ. ನಿರ್ಗತಿಕನಾಗಿದ್ದಾಗ 'ಚನ್ನ' ಎಂದು ಕರೆಸಿಕೊಳ್ಳುತ್ತಿದ್ದವನು ವ್ಯಾಪಾರದಿಂದಾಗಿ 'ಚನ್ನಯ್ಯ'ನಾಗುತ್ತಾನೆ. ಆಕಸ್ಮಿಕವಾಗಿ ದೊರತ ಭಾರಿ ಹಣದಿಂದ ಶ್ರೀಮಂತನಾಗಿ ಚನ್ನಯ್ಯ 'ಚನ್ನೇಗೌಡನಾಗುತ್ತಾನೆ'. ಹಲವಾರು ವರ್ಷಗಳ ಕಾಲ ದಾನ, ಧರ್ಮಮಾಡಿ ಊರಿನವರಿಂದ 'ಸಾಹುಕಾರ್ರು' ಎಂದು ಕರೆಸಿಕೊಳ್ಳುವ ಚನ್ನೇಗೌಡ ಹೆಂಡತಿ ಸತ್ತ ಮೇಲೆ ದುರ್ವ್ಯಸನಕ್ಕೆ ಬಲಿಯಾಗಿ ತನ್ನ ಅಷ್ಟೈಶ್ವರ್ಯವನ್ನು ಕಳದುಕೊಂಡು ಸನ್ಯಾಸಿಯಾಗುತ್ತಾನೆ.

ಕಾದಂಬರಿಯಲ್ಲಿ ಸಮಾಜದಲ್ಲಿ ಬಡವರ ಸ್ಥಾನ ಎಂತಹುದು, ಬಲ್ಲಿದನ ಸ್ಥಾನ ಎಂತಹುದು, ಎಂದು ಚನ್ನನ ಪಾತ್ರದ ಮೂಲಕ ತಿಳಿಯುತ್ತದೆ. .ಶ್ರೀಮಂತರಾಗಿದ್ದ ಮೈಸೂರಿನ ಮಂಡಿವರ್ತಕ ಸುಬ್ಬಣ್ಣನವರು ಸೂಳೆಯರ ಸಹವಾಸ ಮಾಡಿ ಎಲ್ಲವನ್ನು ಕಳೆದುಕೊಳ್ಳುತ್ತಾರೆ. ಕಾದಂಬರಿಯಲ್ಲಿ ಪ್ರಧಾನವಾಗಿರುವುದು ಜಾನಪದ ಶಾಸ್ತ್ರ, ಶಕುನಗಳ ನಂಬಿಕೆ.

'ಕೆಟ್ಟವರಿಗೆ ಕೊನೆಗೆ ಕೆಟ್ಟದ್ದೇ ಆಗುತ್ತದೆ, ಒಳ್ಳೆಯವರಿಗೆ ಒಳ್ಳೆಯದೇ ಆಗುತ್ತದೆ' ಎಂಬ ನೀತಿ ನಾಗೇಗೌಡರ ಉತ್ಕಟತೆಯಿರುವುದು ಅವರು ಕಟ್ಟಿಕೊಡುವ ಜನಪದ ಸಂಸ್ಕೃತಿಯ ಚಿತ್ರಣದಲ್ಲಿ ಕಂಡುಂಡ ಬದುಕನ್ನು ಲವಲವಿಕೆಯಿಂದ ರಸವತ್ತಾಗಿ ವರ್ಣಿಸುವ ಕಲೆ ಅವರಿಗೆ ಸಿದ್ದಿಸಿದೆ. ಹಾಗಾಗಿ ನಾಗೇಗೌಡರು ಕೇಳಿತಿಳಿದ ಕಥೆಯನ್ನು ಪುನರ್ ಸೃಷ್ಟಿಸಿದ್ದಾರೆ ಎನ್ನಬಹುದು.

೧. ಗ್ರಾಮದ ಹಿರಿಯ ದೊಡ್ಡ ಕಂಚೇಗೌಡರು ಕೊಟ್ಟ ಶಾಪ 'ದ್ಯಾವರಗಂಟು ತಿಂದೋನ ಮನೆ ಎಕ್ಕುಟ್ಟೋಗ್ಲಿ ಅವನ ಮನೆ ಹಾಳೊಗೋಗ್ಲಿ'[೧] ಎಂಬುದು ಕೊನೆಗೂ ದಿಟವಾಗಿಬಿಡುತ್ತದೆ. ಚನ್ನಯ್ಯನ ಕುಟುಂದ ಸರ್ವಸ್ವವೂ ನಾಲ್ಕು ತಲೆಗಳವರಿಗೆ ನಾನಾ ಕೋಟಲೆ, ಅಪಮಾನಗಳಿಗೆ ಸಿಕ್ಕಿ ನವೆದು ನೊಂದು ಕೊನೆಗೆ ದುರಂತದಲ್ಲಿ ಪರ್ಯವಸಾನವಾಗುತ್ತದೆ'[೨] ಎನ್ನುವಲ್ಲಿ ಕಾದಂಬರಿ ಏರಿಳಿತ ಅಥವಾ ಜೀವನ ಚಕ್ರ ತಲತಲಾಂತರಗಳಲ್ಲಿ ಯಥಾಸ್ಥಿತಿಗೆ ಬರುವುದನ್ನು ಗುರುತಿಸಲಾಗಿದೆ. ಈ ಕಾದಂಬರಿಯಲ್ಲಿ ಗ್ರಾಮೀಣ ಜನತೆಯ ಸಹಜವಾದ ಪರೋಪಕಾರಿ ಗುಣವನ್ನು ಮಲ್ಲೇಗೌಡರ ಮೂಲಕ ಚಿತ್ರಿಸಿಕೊಡಲಾಗಿದೆ. ಬೇಸಾಯದ ವಿಚಾರಗಳು, ಗರತಿಯ ಲಕ್ಷಣಗಳು, ಜನಪದ ನಂಬಿಕೆಗಳು ಎಲ್ಲವೂ ಸೇರಿ ಒಂದು ಪ್ರಾದೇಶಿಕ ಕಾದಂಬರಿಯಾಗಿದೆ. ಈ ಕಾದಂಬರಿ ನಾಯಕ ಹುಟ್ಟುವಾಗ ಪಡೆದುಕೊಂಡು ಬಂದದ್ದು ಸೊನ್ನೆ, ಭಾರೀ ಶ್ರೀಮಂತನಾಗಿ ಬದುಕಿ ಕೊನೆಗೆ

---

೧.ಸೊನ್ನೆಯಿಂದ ಸೊನ್ನೆಗೆ ಪು. ೨೮

೨.ನಾಗವಲ್ಲಿ- ಶ್ರೀನಾಗೇಗೌಡ ಗೌರವ ಗ್ರಂಥ ೧೯೭೭, ಸಂಪಾದಕರು, ಡಾ/ ಜಿ.ಸಂ.ಪ,ಹ.ಕ.ರಾಜೇಗೌಡ, ಪ್ರದಾನ ಗುರುದತ್ತ, ಲೇಖನ ಸೊನ್ನೆಯಿಂದ ಸೊನ್ನೆಗೆ ಸೀಳು ನೋಟ ನಂ. ತಪಸ್ವೀ ಕುಮಾರ್.

ಉಳಿದಿದ್ದೂ ಸೊನ್ನೆ. ಹಾಗಾಗಿ ಕಾದಂಬರಿಗೆ ಈ ಹೆಸರು ಬಹಳ ಅನ್ವಯವಾಗುತ್ತದೆ ಎನ್ನಬಹುದು.

'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿಯು ಕಥನಕ್ರಮ, ಸನ್ನಿವೇಶ ನಿರ್ಮಾಣ, ಶೈಲಿ ಹಾಗೂ ಒಟ್ಟು ಪರಿಣಾಮದ ದೃಷ್ಟಿಯಿಂದ ನಾಗೇಗೌಡರ 'ನನ್ನೂರು', 'ದೊಡ್ಡಮನೆ'ಗಳ ಸಾಲಿಗೆ ಸೇರುತ್ತದೆ. ಇಂತಹ ಕೃತಿ ನಾಗೇಗೌಡರ ಲೇಖನಿಯಿಂದ ಮಾತ್ರ ಸಾಧ್ಯ ಎನ್ನಬಹುದು. "ಅನ್ಯರ ಅನುಭವವನ್ನು ಕೇಳಿ ಕಲ್ಪನೆಯಿಂದ ನಿರೂಪಣೆಮಾಡಿ ಲೇಖಕರು ಯಶಸ್ವಿಯಾಗಬಲ್ಲರು ಎಂಬುದಕ್ಕೆ ಸೊನ್ನೆಯಿಂದ ಸೊನ್ನೆಗೆ ಒಂದು ಒಳ್ಳೆಯ ಉದಾಹರಣೆಯಾಗಿದೆ".[೧] 'ಈ ಮಾತನ್ನು ಗಮನಿಸಿದಾಗ ಸೃಜನಶೀಲತೆ ಇರುವ ಮನಸ್ಸು ಯಾವುದರಿಂದಲೂ ಸ್ಫೂರ್ತಿ ಪಡೆದು ಮುನ್ನಡೆಯುತ್ತದೆ ಎಂಬುದಕ್ಕೆ ನಾಗೇಗೌಡರು ಸಾಕ್ಷಿಯಾಗುತ್ತಾರೆ.

**ಭೂಮಿಗೆ ಬಂದ ಗಂಧರ್ವ;-**

ಕಲಾವಿದನ ಜೀವನ ಸಾಮಾನ್ಯ ಜನರ ಜೀವನಕ್ಕಿಂತ ಭಿನ್ನವಾಗಿರುತ್ತದೆ. ವಿಶೇಷವಾದುದಾಗಿರುತ್ತದೆ ಎಂಬ ನಂಬಿಕೆ ಅಥವಾ ಅನುಭವ, ಕನ್ನಡದಲ್ಲಿ ಕಲಾವಿದರನ್ನು ನಾಯಕರನ್ನಾಗಿ ಮಾಡಿಕೊಂಡು ರಚಿತವಾದ ಕಾದಂಬರಿಗಳನ್ನು ಗಮನಿಸಿದಾಗ ತಿಳಿಯುತ್ತದೆ. ಒಬ್ಬ ಕಲಾವಿದನ ಸೃಜನಶೀಲ ಶಕ್ತಿ ಸಾಮಾನ್ಯ ಜನಕ್ಕಿಂತ ಅವನನ್ನು ಭಿನ್ನವಾಗಿಸುವುದು ಸಹಜ. ಏಕೆಂದರೆ ಸೃಜನಶೀಲವ್ಯಕ್ತಿ ಸಾಮಾನ್ಯ ತನ್ನ ಅನುಭವಗಳಿಗೆ ಇತರರಿಗಿಂತ ತ್ವರಿತವಾಗಿ ತೀಕ್ಷ್ಣವಾಗಿ ಸ್ಪಂದಿಸುತ್ತಾನೆ. ಈ ಸೃಜನಶೀಲ ಶಕ್ತಿ ಆತನನ್ನು ಇತರರಿಗಿಂತ ಭಿನ್ನವಾಗಿಸುವ ದಿಕ್ಕಿನಲ್ಲಿ ತೊಡಗುತ್ತದೆ.

ಕನ್ನಡದಲ್ಲಿ ಕಲಾವಿದರನ್ನು ನಾಯಕರನ್ನಾಗುಳ್ಳ ಕಾದಂಬರಿಗಳು ಅದರ ಪ್ರಾರಂಭದ ದಿನಗಳಿಂದ ಇಂದಿನವರೆಗೂ ಖಚಿತವಾಗುತ್ತಾ ಬಂದಿವೆ.

ಅವುಗಳಲ್ಲಿ

'ಅ.ನ.ಕೃ ಅವರ 'ಸಂಧ್ಯಾರಾಗ'

'ಮಾಸ್ತಿ' ಅವರ 'ಸುಬ್ಬಣ್ಣ'

ತ.ರಾ.ಸು ಅವರ 'ಹಂಸಗೀತೆ.

---

೧.ನಾಗಸಂಪದ. ಸಂ.ಡಾ. ಚಕ್ಕೆರೆ ಶಿವಶಂಕರ್, ಕರ್ನಾಟಕ ಜಾನಪದ ಪರಿಷತ್ತು ೨೦೦೧, (ರಂ.ಶ್ರೀ. ಮುಗಳಿಯವರ ಪತ್ರದಿಂದ)

ಕೃತಿಗಳು ಪ್ರಮುಖವಾದುವು. ಆ ಸಾಲಿನಲ್ಲಿ ನಾಗೇಗೌಡರ ಭೂಮಿಗೆ ಬಂದ ಗಂಧರ್ವ' ಈ ಸಂಪ್ರದಾಯದಲ್ಲಿ ಇತ್ತೀಚಿನದು. ಇದು ಸಂಗೀತಗಾರನೊಬ್ಬನನ್ನು ನಾಯಕರನ್ನಾಗಿಟ್ಟುಕೊಂಡು ರಚಿತವಾದುದು.

ಶ್ರೀ ಎಚ್.ಎಲ್.ನಾಗೇಗೌಡರು ಬರೆದಿರುವ ಕಾದಂಬರಿಗಳಲ್ಲಿ ವಿಸ್ತಾರವಾದುದೂ ವೈವಿಧ್ಯಮಯವಾದುದೂ ಆಗಿದೆ. ಅಡಿಯಿಂದ ಮುಡಿತನಕ ಅರಳಿದ ಹೂಗೊಂಚಲುಗಳಿಂದ ಕಂಗೊಳಿಸುವ ಲತೆಯಂತೆ ಈ ಕೃತಿ ಮನೋಹರವಾಗಿದೆ. ಎಲ್ಲಿ ನೋಡಿದರೂ ಮಲ್ಲಿಕಾ ಸುಮ-ಸುಮ ಎಲ್ಲಿ ಮೂಸಿದರೂ ಗಮಗಮ! ನಾದಮಯವೂ ಕಾವ್ಯಯವೂ ಆದ ಈ ಕೃತಿ ಕನ್ನಡದಲ್ಲಿ ಕಾದಂಬರಿಯ ಲೋಕದ ಧ್ರುವತಾರೆಯಾಗಿ ವಿರಾಜಿಸುತ್ತಿದೆ. ಮಹಾ ಸಾಧನೆ, ಮಹಾಸಿದ್ಧಿ ಮತ್ತು ಮಹಾಪ್ರಸಿಧ್ಧಿಗಳಿಂದ ಕೆಂಪೇಗೌಡರ ಜೀವನವೂ ಕನ್ನಡದ ಹೂದೋಟದಲ್ಲಿ ದವನದಲ್ಲಿ ಬುಡದಿಂದ ಸುಳಿಯತನಕ ನಸುಗಂಪನ್ನು ಬೀರುವುದು. ನಾನಾ ರಾಗಗಳ ಇಂಪನ್ನೂ, ಪೆಂಪನ್ನೂ ಲೇಖಕರು ಓದುಗರ ಮನಮುಟ್ಟುವಂತೆ ಮತ್ತೆ ಮತ್ತೆ ವಿವರಿಸುವಾಗ ಕೆಲವೊಮ್ಮೆ ಪುನರಾವರ್ತನೆಯಾಗಿರುವುದು ದಿಟವಾದರೂ ಕಾದಂಬರಿ ಯಾವ ಭಾಗದಲ್ಲೂ ನೀರಸವಾಗಿಲ್ಲ ಎಂದು ಧೈರ್ಯವಾಗಿ ಹೇಳಬಲ್ಲೆನು. ಕೆಂಪೇಗೌಡರ ಬಾಲ್ಯವೆಲ್ಲ ಅವರ ಆಶೆ ಆಕಾಂಕ್ಷೆಗಳಿಗೆ ತಣ್ಣೀರು ಎರುಚುವ ಅಡ್ಡಿ ಆತಂಕಗಳ ಆಗರವಾಗಿರುವುದನ್ನು ಲೇಖಕರು ಓದುಗರ ಕರುಳು ಮಿಡಿಯುವಂತೆ ವಿವರಿಸಿದ್ದಾರೆ. ಗಾನಲೋಲನಾಗಲು ಹಾತೊರೆಯುತ್ತಿದ್ದ ಕೆಂಪೇಗೌಡರ ಗೀಳನ್ನು ಇವರ ಅಜ್ಜಿಯು 'ಗಾಳಿ' ಎಂದು ಭ್ರಮಿಸಿ ಅದನ್ನು ಬಿಡಿಸಲು ಪೂಜೆ ಪುನಸ್ಕಾರಗಳ ಮೊರೆ ಹೋಗುವಳು ಗೌಡರ ತಂದೆ ಸಂಗೀತವನ್ನು ಸೂಳೆಯರ ಕಲೆಯೆಂದು ತುಚ್ಚವಾಗಿ ಕಾಣುವನು. ಬಾಲ್ಯದಲ್ಲಿ ಗೌಡರ ಇಂಪಾದ ಕಂಠವನ್ನು ಕಂಡು ಪುಟ್ಟಣ್ಣಗೌಡರೂ, ಚನ್ನೇಗೌಡರು ಮೈಸೂರಿನ ಆಸ್ಥಾನದ ಸಂಗೀತಗಾರ ತಿಮ್ಮಯ್ಯನವರ ಬಳಿ ಬಾಲಕನಿಗೆ ಸಂಗೀತ ಒಲಿಯದು ಎಂದು ಹೇಳಿ ನಿರಾಕರಿಸುವ ಸಂದರ್ಭವನ್ನು ಕಾದಂಬರಿಕಾರರು ಮಾರ್ಮಿಕವಾಗಿ ವಿವರಿಸಿದರು.

ಗೌಡರ ಅಜ್ಜ ಸಹೃದಯರಾಗಿದ್ದರು ಮೊಮ್ಮಗನ ಹಂಬಲಕ್ಕೆ ಬೆಂಬಲವಾಗಿ ಗೌಡರನ್ನು ಮುಂಡೆಭಾಗವತರ ಬಳಿ ಬಿಟ್ಟು ಪಾಠ ಹೇಳಿಸಿದನು. ಸಾಯುವಾಗ ಮೊಮ್ಮಗನಿಗೆ ಹತ್ತು ಸಹಸ್ರ ರೂಗಳನ್ನು ಕೊಟ್ಟು ಸಂಗೀತ ಕಲಿಯುವಂತೆ ಪ್ರೇರೇಪಿಸಿ ಸತ್ತನು. ಗೌಡರು ತಿರುವಯ್ಯರಿಗೆ ಬಂದರು. ತ್ಯಾಗರಾಜ್ಯೋತ್ಸವದಲ್ಲಿ ಹಾಡಿದ ಸಂಗೀತಗಾರರಲ್ಲಿ ಸುಬ್ರಮಣ್ಣಯ್ಯರನ್ನು ಗುರುವೆಂದು ತೀರ್ಮಾನಿಸಿಕೊಂಡರು. ಅವರ ಸನ್ನಿಧಿಯನ್ನು ಪಡೆಯಲು ಇವರು ಪಟ್ಟ ಪಾಡು ಅಷ್ಟಿಷ್ಟೆ? ಅವರ ಮನೆಯದನಗಾಹಿಯಾಗಿ ಸೇರಿದರು. ಮೈಯೆಲ್ಲಾ ಕಿವಿಯಾಗಿ ಬಾಳಿದನು. ಅಯ್ಯರ್ ವಿದ್ಯಾರ್ಥಿಗಳಿಗೆ ಹೇಳುವ ಪಾಠವನ್ನು ಆಲಿಸಿ ಆಲಿಸಿ ಗೌಡರು ಸಂಗೀತ ಪಾರಂಗತವಾದುದನ್ನು ಲೇಖಕರು ಮನಮುಟ್ಟುವಂತೆ ವಿವರಿಸಿದರು. ಕೊನೆಗೆ ಗುರುವಿನ ಅನುಗ್ರಹ ಪಡೆದು ಅವರ ಮನವನ್ನು ಗೌಡರು ತಮ್ಮ ವಿನಯದಿಂದಲೂ ನಿಷ್ಠೆಯಿಂದಲೂ ಒಲಿಸಿಕೊಂಡು ಅವರ ಸಂಗೀತಕಲೆಯನ್ನು ಇವರು

ಕರತಲಾಮಾಡಿಕೊಂಡರು. ಅಜ್ಜ ತಮಗೆ ಕೊಟ್ಟಿದ್ದ ಹತ್ತು ಸಹಸ್ರರೂಗಳನ್ನು ಎರಡು ಸಂದರ್ಭಗಳಿಗೆ ಗುರು ಕಾಣಿಕೆಯಾಗಿ ಅರ್ಪಿಸಿ ಗೌಡರು ಕೃತಾರ್ಥರಾದರು. ಭಕ್ತಿಯಿಂದ ಗುರು ಹಿರಿಯರ ಮುಂದೆ ಬಾಗಿ ಗೌಡರು ಶಕ್ತಿ ಸಂಪನ್ನರಾದುದನ್ನು ಕಾದಂಬರಿಕಾರರು ಸಹಜವಾಗಿ ವಿವರಿಸಿರುವರು. ಗೌಡರ ಸಾಧನೆಯನ್ನು ಲೇಖಕರು ಕಲೆಯ ನನೆಕೊನೆಯಾಗುವಂತೆ ಕಡೆದಿರುವರು. ಗೌಡರ ಕೌಟುಂಬಿಕ ಜೀವನವನ್ನು ಲೇಖಕರು ಕಲಾಯುಕ್ತವಾಗಿ ಬಣ್ಣಿಸಿರುವರು. ಇವರ ಮಡದಿ ಚೆನ್ನಮ್ಮ ಗೌಡರ ಕೈಯ ವೀಣೆಯಾಗಿ ಇವರ ಗುರಿಯ ಸಿರಿಯಾಗಿ ಇವರ ಸಂಗೀತಕ್ಕೆ ಎಂದೂ ತಪ್ಪದ ತಾಳವಾಗಿ ಇವರ ಸ್ಫೂರ್ತಿಯ ಸೆಲೆಯಾಗಿ ಬಾಳಿದಳು. ಗಂಡ ತನ್ನನ್ನು ಬಿಟ್ಟು ಸಂಗೀತ ಕಲಿಯಲು ಹೊರಟಾಗ ಶುಭವನ್ನು ಕೋರಿ ಬೀಳ್ಕೊಟ್ಟಳು. ವೇಶ್ಯೆಯ ಮಗಳಾದ ಪುಷ್ಪಳಿಗೆ ಗೌಡರು ಸಂಗೀತ ಕಲಿಸಲು ಒಪ್ಪಿಕೊಂಡಾಗಲೂ ಚೆನ್ನಮ್ಮ ಮುನಿಸನ್ನು ತೋರದೆ ಗಂಡನಲ್ಲಿ ನಂಬಿಕೆಯಿಟ್ಟು ಸುಮ್ಮನಾದಳು. ಗೌಡರ ಉತ್ಸಾಹದಲ್ಲಿ ಉಲ್ಲಾಸವಾಗಿ ಈಕೆ ಒಂದು ಗಂಡು ಒಂದು ಹೆಣ್ಣು ಈ ರೀತಿ ಎರಡು ಮಕ್ಕಳನ್ನು ಹೆತ್ತು ಕಾಲವಾದಳು. ಈ ದಂಪತಿಗಳ ಬಾಳ್ವೆಯಲ್ಲಿ ಲೇಖಕರು ಹಿತಮಿತವಾದ ಸರಸ ಸಲ್ಲಾಪವನ್ನೂ ಸಾತ್ವಿಕ ಶೃಂಗಾರವನ್ನು ಹೃದಯಂಗಮವಾಗಿ ತಂದಿರುವರು.

ಗೌಡರು ಪರಿವ್ರಾಜಕರಾಗಿ ಎಲ್ಲೆಲ್ಲೋ ಸುತ್ತಿದರು. ಮೈಸೂರಿನ ಚಾಮರಾಜರ ಸ್ನೇಹವನ್ನೂ ಪಡೆದರು. ಚಾಮರಾಜರು ಸಾಯುವತನಕ ಅವರ ಜೊತೆಯಲಿದ್ದು ಅನಂತರ ಸಂಕೋಲೆ ಕಳಚಿಕೊಂಡ ದಿಗ್ಗಜರಾಗಿ ಆ ಸೇತು ಹಿಮಾಚಲದ ತನಕ ಅಲೆದರು.

ಸಂಗೀತ ರಾಗರಸಿಕರಾದ ಗೌಡರು ಒಲಿಸಿಕೊಂಡ ರಾಗಗಳು ಒಂದೇ! ಎರಡೇ! ಭೈರವಿರಾಗ ಇವರ ಉಸಿರಾಗಿತ್ತು. ಮೈಸೂರು ಅರಮನೆಯಲ್ಲಿ ಸಾರಂಗವನ್ನು ಹಾಡಿ ಜೀವಂತ ಸಾರಂಗವನ್ನು ವಶೀಕರಣ ಮಾಡಿಕೊಂಡರು. ಬೇಗಡೆಯನ್ನು ಹಾಡುತ್ತಾ ಲೋಕದ ಬೇಸರವನ್ನು ನೀಗಿದರು. ಖರಹರಪ್ರಿಯ ರಾಗವು ಇವರ ಕಂಠದಲ್ಲಿ ಬಂದಾಗ ಶಶಿಧರ ಸುಳಿದಂತಾಗಿತ್ತು. ಜಾವಳಿಗಳನ್ನು ಇವರು ಉಲಿದಾಗ ತಾರಳಿಗಳು ಕುಣಿದಂತಾಗುತ್ತಿತ್ತು. ಶಂಕರಾಭರಣದಲ್ಲಿ ಶಂಕರನಾಗಿದ್ದ ಶಂಕರಪಿಳ್ಳೆಯು ಅದೇ ರಾಗವನ್ನು ಗೌಡರು ಹಾಡಿದ್ದನ್ನು ಕೇಳಿ ಇವನು ಕಿಂಕಿರನಾದನು. ಕಲ್ಯಾಣಿ, ಕೇದರಗೋಳ, ಆನಂದಭೈರವಿ ರಾಗಗಳನ್ನು ಗೌಡರು ಹಾಡಿದಾಗ ಬೆಳದಿಂಗಳು ಹರಿದಂತೆ, ಮಲ್ಲಿಗೆ ಹೂವನ್ನು ಎರಚಿದಂತೆ, ಮಿಂಚಿನ ಬಳಗ ಕುಣಿದಂತೆ ಆಗುತ್ತಿತ್ತು. ಗೌಡರು ಹಾಡಿದ ಒಂದೊಂದು ಸಂದರ್ಭದಲ್ಲೂ ಲೇಖಕರು ಹೃದಯಂಗಮವಾಗಿ ಇಂಪಿನ ಇಂಗಡಲಾಗುವಂತೆ ಬಣ್ಣಿಸಿರುವರು. ನಾದಮಯವಾದ ಸಂಗೀತ ಈ ಕಾದಂಬರಿಯ ಉದ್ದಕ್ಕೂ ಅಮೋದವಾಗುವಂತೆ ಭಾಷಾಮಾಧ್ಯಮದಲ್ಲಿ ಬೆಡಗನ್ನು ಪಡೆದಿವೆ. ಇಂಥ ಚಿತ್ರಣಗಳನ್ನು ಕಾಣಬೇಕಾದರೆ ನಾವು ಭರತೇಶವೈಭವಕ್ಕೆ ಹೋಗಬೇಕು. ಭೂಮಿಗಿಳಿದ ಗಂಧರ್ವ ನಾದರತ್ನಾಕರವಾಗಿ ವಿಜೃಂಭಿಸುವುದು. ವಾದ್ಯಪರಿಕರಗಳನ್ನೆಲ್ಲ ಲೇಖಕರು ಸಂದರ್ಭೋಚಿತವಾಗಿ ಈ ಕೃತಿಯಲ್ಲಿ ಕಾಣಿಸಿರುವರು. ತಮ್ಮ ಅಜ್ಜ ಕೊಟ್ಟಂಥ ಹಣವನ್ನೆಲ್ಲಾ ಗೌಡರು ಗುರುಕಾಣಿಕೆಯಾಗಿ ಕೊಟ್ಟರು. ರಾಜಮಹಾರಾಜರು ಕೊಟ್ಟ

ಧನಕನಕಗಳೆಲ್ಲ ಇವರಿಗೆ ಭಾರವಾಗಿ ತೋರಿ ಅಂದದಿನ ಆದಾಯವನ್ನು ಅಂದಂದೇ ಸತ್ಪಾತ್ರಗಳಿಗೆ ನೀಡಿ, ದೀನ ದಲಿತರನ್ನು ಸಂತೈಸುತ್ತಾ ಈ ಗಾನ ಯೋಗಿ ಒಳಗೂ ಬಾವಲಿಗಳನ್ನೆಲ್ಲಾ ನಿರಾಕರಿಸಿ ಕೆಲವೊಮ್ಮೆ ಒಪ್ಪಿಕೊಂಡರೂ ಇನ್ನಾರ ಕೊರಳಿಗೋ ಅದನ್ನು ಕಟ್ಟಿ ಇವರು ಕೈತೊಳೆದುಕೊಳ್ಳುತ್ತಿದುದ್ದನ್ನು ಲೇಖಕರು ಆಗಾಗ ವಿವರಿಸಿದರು.

ಗೌಡರ ಸಾವೂ ಮಹಾತ್ಮರ ಸಾವಿನಂತೆ ಇದೆ. ಭೈರವಿಯನ್ನೂ ಹಾಡುತ್ತಾ ಇವರು ಸಂಗೀತ ಸಮಾಧಿ ಮರಣವನ್ನು ಪಡೆದ ಸಂದರ್ಭ ಹೃದಯ ಕಲುಕುವಂತಹುದು. ಆಸ್ಪತ್ರೆಯ ರೋಗಿಗಳೆಲ್ಲ ಗೌಡರ ಸಂಗೀತವನ್ನು ಆಲಿಸಿ ತಮ್ಮ ಸಂಕಟವನ್ನು ಕ್ಷಣಕಾಲ ಮರೆತಿರುವಾಗ ಗೌಡರು ಕಣ್ಮುಚ್ಚಿದರು. ಇವರ ಪ್ರಾಣಭೈರವಿ ಇವರ ದೇಹವನ್ನು ತೊರೆದು ವಿದೇಹಿಯಾಯಿತು. ಗೌಡರಿಗೆ 'ಸಂಗೀತ–ಮೋಕ್ಷ' ಲಭಿಸಿರಬೇಕು. ಈ ಕಾದಂಬರಿಯಲ್ಲಿ ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನೆ ಹಲವಾರು ಸಂಗೀತ ಮಹಾಪುರಷರ ವ್ಯಕ್ತಿ ಚಿತ್ರಣಗಳನ್ನು ಲೇಖಕರು ಸ್ವಾರಸ್ಯವಾಗಿ ತಂದಿರುವರು. ಇವರಲ್ಲಿ ಲೌಕಿಕರೂ ಇರುವರು ಅಲೌಕಿಕರೂ ಇರುವರು. ಈ ಸಂಗೀತ ಮಹಾಪುರುಷರ ನಡುವೆ ಕೆಂಪೇಗೌಡರು ಸಂಗೀತಕೌಸ್ತುಭರತ್ನವಾಗಿ ರಾರಾಜಿಸುತ್ತಿರುವರು. ಸಂಗೀತಗಾರನ ಬದುಕನ್ನು ಚಿತ್ರಿಸಲು ಲೇಖಕರು ಹದವಾದ ಹಾಗೂ ಸಂದರ್ಭಕ್ಕೆ ಒಪ್ಪುವಂಥ ಭವ್ಯವಾದ ಭಾಷೆಯನ್ನು ಪಳಗಿಸಿ ಬಳಸಿರುವರು.

## ಅಧ್ಯಾಯ- ೫

## ಕಾದಂಬರಿಗಳ ಪಾತ್ರ ಸೃಷ್ಟಿ:-

ಕಾದಂಬರಿಕಾರ ತಾನು ಜನರೊಂದಿಗೆ ಹೊಂದಿರುವ ಸಂಪರ್ಕ ಹಾಗೂ ಮಾನವ ಸ್ವಭಾವದ ಬಗ್ಗೆ ತನಗಿರುವ ಅನುಭವಗಳಿಂದ ಪಾತ್ರಗಳನ್ನು ಸೃಷ್ಟಿಸುತ್ತಾನೆ. ವ್ಯಕ್ತಿಗಳ ಅಂತರಾಳವನ್ನು ಗಾಢವಾಗಿ ಅವಲೋಕಿಸುತ್ತಾನೆ. ವ್ಯಕ್ತಿಯ ಹೊರರೂಪ ಆಕಾರ, ವಸ್ತ್ರಭೂಷಣ ಕಾದಂಬರಿಕಾರ ಅಷ್ಟಕ್ಕೆ ತೃಪ್ತಿನಾಗುವುದಿಲ್ಲ. ಆ ರೂಪ, ಆಕಾರ, ವಸ್ತ್ರಾಭರಣಗಳ ಹಿಂದಿರುವ, 'ನಿಜಮಾನವ'ನನ್ನು ಅವನು ಅರುಸುತ್ತಾನೆ. ಆ ಮಾನವನ ಆಸೆ, ಆಕಾಂಕ್ಷೆ, ತ್ಯಾಗ ಭೋಗ, ಪ್ರವೃತ್ತಿ, ನಿವೃತ್ತಿಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾನೆ. ಇಂಗ್ಲೆಂಡಿನ ಕಾದಂಬರಿಕಾರ ಹಾಗೂ ನಾಟಕಕಾರ ಜಾನ್ ಗಾಲ್ಸ್‌ವರ್ದಿ (೧೮೬೭-೧೯೩೩) ಪಾತ್ರವೇ ಕಥೆಯ ವಿನ್ಯಾಸ Character is plot ಎಂದು ಹೇಳಿದ್ದಾನೆ. ಅವನ ಅಭಿಪ್ರಾಯದಲ್ಲಿ ಮಾನವನ ಕ್ರಿಯೆ ಮತ್ತು ಚಿಂತನೆಗಳಿಂದ ಅವನ ವ್ಯಕ್ತಿತ್ವ ರೂಪುಗೊಳ್ಳುವಂತೆ ಕಥೆ ಕಾದಂಬರಿಯಲ್ಲಿ ಸಹ ಪಾತ್ರದ ವ್ಯಕ್ತಿತ್ವವನ್ನು ನಿರ್ಧರಿಸುವುದು ಅವನ ಕ್ರಿಯೆ ಮತ್ತು ಚಿಂತನೆಗಳು ವಿನ್ಯಾಸ, ದೃಷ್ಟಿಕೋನ, ಪರಿಸರ ಮೊದಲಾದ ಅಂಶಗಳು ಕಥೆಗೆ ಅಗತ್ಯವಾದರೂ ಅದರ ಸಮಗ್ರ ಪರಿಣಾಮ ದೊರಕುವುದು ಪಾತ್ರಗಳಿಂದ ವಾಚಕರು ಮಾನವ ಸ್ವಭಾವದ ಬಗ್ಗೆ ಆಸಕ್ತರಾಗುವುದು ಸಹ ಪಾತ್ರಗಳ ಪ್ರಾಮುಖ್ಯತೆಗೆ ಕಾರಣ.

ನಾಗೇಗೌಡರು ಪಾತ್ರ ಚಿತ್ರಣದಲ್ಲಿ ಎತ್ತಿದ ಕೈ, ತಾವು ಚಿಕ್ಕಂದಿನಲ್ಲಿ ಕಂಡ ವ್ಯಕ್ತಿಗಳು ಕಾದಂಬರಿಯಲ್ಲಿ ಜೀವಂತ ಪಾತ್ರಗಳಾಗಿ ರೂಪುಗೊಂಡಿವೆ. ಅವರ 'ದೊಡ್ಡ ಮನೆ ಮತ್ತು ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯಲ್ಲಿ ಬರುವ ಕೆಲವು ಪಾತ್ರಗಳು ಓದುಗರ ಮನಸ್ಸಿನಲ್ಲಿ ನಿಂತು ಬಿಡುತ್ತವೆ, ನಾಗೇಗೌಡರ ಈರಬೊಮ್ಮ, ಗೆಂಡೇಕಾಳ, ಆಸ್ತಿಗೌಡ, ಕುಂಡಪ್ಪ, ಸರ್ವಜ್ಞಸಂಗಣ್ಣ ಈ ಕೆಲವರ ಪಾತ್ರಗಳನ್ನು ಇಲ್ಲಿ ಸ್ಮರಿಸಬಹುದು. ಇದರ ಬೃಹತ್‌ಗೆ ತಕ್ಕಂತೆ ಇಲ್ಲಿ ಹಲವಾರು ಪಾತ್ರಗಳು ಬರುತ್ತವೆ.

'ಮರಳಿಮಣ್ಣಿಗೆ'ಯಂತೆ ದೊಡ್ಡಮನೆ ಕೂಡ ಮೂರು ತಲೆಮಾರಿನ ಜೀವನವನ್ನು ಕುರಿತದ್ದು ಕಾದಂಬರಿಯಲ್ಲಿ ಮೊದಲ ತಲೆಮಾರನ್ನು ಪ್ರತಿನಿಧಿಸುವ ಪಾತ್ರ ನಂಜೇಗೌಡರಿಂದ ಪ್ರಾರಂಭವಾಗುವ ಕಥೆ ಮೊಮ್ಮಗ 'ನಾಗು'ವಿಗೆ ಬಂದು ಮುಟ್ಟುತ್ತದೆ. ನಂಜೇಗೌಡರಾದಿಯಾಗಿ ಸುಮಾರು ಐವತ್ತು ಪಾತ್ರಗಳ ಕಾದಂಬರಿಯಲ್ಲಿ ಕಂಡು ಬರುತ್ತದೆ. ಅರ್ಜಿಕೊಂಬಲ್ಲ, ಪಂಡಿತ ನಿಂಗಣ್ಣ, ಪೂಜಾರಿ ಕರಿಯಣ್ಣ, ನರೀಹಳ್ಳಿ ಕರೀಗೌಡ, ಪಟೇಲ್‌ರಂಗೇಗೌಡ, ದರ್ಜಿ ರಾಮಣ್ಣ, ಮಗ್ಗದ ನರಸಿಂಹ, ಗೆಂಡೇಕಾಳ, ಗಾಣಿಗಾರ ವೆಂಕಟರಮಣಶೆಟ್ಟಿ, ಗಂಟಿಟ್ಟನ ನಿಂಗಯ್ಯ, ಸುಸ್ತಿಗೌಡ, ಕಕ್ಕೆನಹಳ್ಳ

ಉಪಾದ್ರಿಚನ್ನಪ್ಪ. ಕೊರಮರ ನರಸಮ್ಮ ಹೀಗೆ ಕಾದಂಬರಿಯಲ್ಲಿನ ಬಹುಪಾಲು ಪಾತ್ರಗಳು ತಮ್ಮ ಹೆಸರಿನ ಹಿಂದೆ ಊರಿನ ಅಥವಾ ವೃತ್ತಿಯ ಅಥವಾ ಮತ್ತಾವುದೂ ವಿಶೇಷಣವನ್ನು ಅಂಟಿಸಿಕೊಂಡೇ ಬರುತ್ತವೆ. ಪಾತ್ರಗಳ ಹಾಗೆ ಹೆಸರುಗಳು ಕೂಡ ವಿಚಿತ್ರವೂ, ವೈವಿಧ್ಯಮಯವೂ ಆಗಿವೆ. ಈ ಬಗೆಯ ವೈವಿಧ್ಯಮಯ ಪಾತ್ರ ಸರಣಿಯಲ್ಲಿ ತಮ್ಮ ಗುಣ ನಡತೆಗಳಿಂದ ಆದರ್ಶವೆನಿಸಿಕೊಳ್ಳುವ ಕೆಲವು ಮಂದಿಯ ವಿಶ್ಲೇಷಣೆ ಮಾತ್ರ ಇಲ್ಲಿ ಬರುತ್ತದೆ.

**ನಂಜೇಗೌಡ:-**

'ದೊಡ್ಡ ಮನೆ' ಎಂಬುದು 'ನನ್ನೂರು ಎಂಬ ಒಂದು ಊರಿನ ಒಂದು ಮನೆ, ಆ ಮನೆ ಹೆಸರಿಗೆ ತಕ್ಕಂತೆ ದೊಡ್ಡದೇ ಹೌದು. ಮನೆಯಷ್ಟೇ ಅಲ್ಲ ಮನೆಯಲ್ಲಿರುವ ಗುಣ ಕೂಡ ದೊಡ್ಡದೇ. ದೊಡ್ಡ ಮನೆಗೆ ಕಳಶವಿದ್ದಂತೆ ನಂಜೇಗೌಡರು ಅದರ ಯಜಮಾನರು, ಗೌರವಾನ್ವಿತರು ಇಲ್ಲದ್ದಕ್ಕೆ ಆಸೆ ಪಡದೇ, ಇದ್ದುದ್ದಕ್ಕೆ ಅಸಯ್ಯ ಪಡದೆ ಬಡತನ ಸಿರಿತನಗಳನ್ನು ಸಮವಾಗಿ ಕಾಣುತ್ತ ಬಾಳುತ್ತಿದ್ದವರು.

ಊರು ಎಂದ ಮೇಲೆ ಎಲ್ಲವೂ ಇದ್ದದ್ದು ನಂಜೇಗೌಡರ ದಾಯಾದಿ ಪಟೇಲ್ ಮುದ್ದೇಗೌಡರು ನಂಜೇಗೌಡರಿಗಿರುವ ದೊಡ್ಡಮನೆಯವರು ಎಂಬ ಬಿರುದನ್ನು ಹೇಗಾದರು ಮಾಡಿ ತಾನು ಪಡೆಯಬೇಕು, ಆ ಗೌರವ ತನಗೆ ಲಭಿಸುವಂತೆ ಮಾಡಬೇಕೆನ್ನುವ ಹೊಂಚಿಕೆಯಲ್ಲಿ ಸದಾ ಇರುವವರು ಅಂಥ ಯೋಗ್ಯತೆ ತನ್ನಲ್ಲಿಲ್ಲಿವಾದರೂ ತಾನು ದೊಡ್ಡವನು ಎನ್ನಿಸಿಕೊಳ್ಳಬೇಕೆಂಬ ಕ್ಷುದ್ರ ಬಯಕೆ ಮುದ್ದೇಗೌಡರುದು ದಾಯಾದಿ ಮಾತ್ಸರ್ಯ ಬೂದಿ ಮುಚ್ಚಿದ ಕೆಂಡದಂತಿತ್ತು.

ಪಟೇಲರ ಗುಣಕ್ಕೆ ತದ್ವಿರುದ್ಧವಾದುದು ನಂಜೇಗೌಡರ ಗುಣ ಅವರಿವರ ಮಾತು ಕೇಳಿ ಅಣ್ಣ ತಮ್ಮತನದಲ್ಲಿ ವೈಷಮ್ಯ ತಂದುಕೊಳ್ಳಬಾರದೆಂದು ಅವರ ಭಾವನೆ, 'ಅವರ ಪಾಡಿಗೆ ಅವರು ತಮ್ಮ ಪಾಡಿಗೆ ತಾವು ಈ ಪ್ರಪಂಚದಲ್ಲಿ ಇರುವವರೆಗೂ ನಾಲ್ಕು ದಿವಸ ನೆಮ್ಮದಿಯಾಗಿ ಬಾಳೋ ಬಿಟ್ಟು, ಜಗಳ ಗುದ್ದಾಟ ಯಾಕೆ'? ಎಂಬುದು ನಂಜೇಗೌಡರು ಅನುಸರಿಸಿಕೊಂಡು ಬರುತ್ತಿದ್ದ ನೀತಿಯಾಗಿದೆ. ಕಾದಂಬರಿಯಲ್ಲಿ ಪಟೇಲ್ ಮುದ್ದೇಗೌಡರನ್ನು ಕಂಡು ತನ್ನ ಮಗನೆ ತಪ್ಪನ್ನು ಕ್ಷಮಿಸೆಂದು ಕಾಲುಹಿಡಿದು ಬೇಡುತ್ತಾರೆ. ಕೊನೆಗೆ ಮುದ್ದೇಗೌಡ ನಂಜೇಗೌಡರಿಗೆ ಕರಗುತ್ತಾನೆ. ಹಾಗೆಯೇ ಆದರ್ಶವಾದಿ ತಂದೆಯಾಗಿ ನಂಜೇಗೌಡರು ಶೋಭಿಸುತ್ತಾರೆ.

ಹಣಕಾಸಿನ ವಿಚಾರದಲ್ಲಿ ಮತ್ತೊಬ್ಬರದಕ್ಕೆ ಆಸೆ ಪಟ್ಟವರಲ್ಲ ನಂಜೇಗೌಡರು ತಾನು ಬೆವರು ಸುರಿಸಿ ದುಡಿದು ಸಂಪಾದಿಸಿದಷ್ಟನ್ನೇ ತನ್ನದು ಎಂದು ತಿಳಿಸಿದವರು. ಮಗನನ್ನು ಕುರಿತು ದುಡ್ನಾ ಕಷ್ಟಪಟ್ಟು ಬೆವರು ಸುರಿಸಿ ದುಡಿಬೇಕು ಲಿಂಗೂ, ಖರ್ಚು ಮಾಡುವಾಗ್ಲೂ ಯಾವುದಕ್ಕೂ ಮಾಡ್ಬಾರ್ದು ಅಂಥ ತಿಳಿದು ಮಾಡ್ಬೇಕು ಎಂದು ಹೇಳಿರುವ ಮಾತುಗಳು ಸಂಯಮ ಪೂರಿತವಾದುವು.

ಮನೆಯ ಹಿರಿಯರಾಗಿ ಅವರು ಜವಾಬ್ದಾರಿಯನ್ನು ಚೆನ್ನಾಗಿ ಅರಿತುಕೊಂಡಿದ್ದರು. ದಾಯಾದಿ ಮುದ್ದೇಗೌಡರು ದೊಡ್ಡ ಮನೆಯನ್ನು ಮುರಿಯುವ ನಿರ್ಧಾರ ಮಾಡಿದಾಗ ತಮ್ಮ ಆತ್ಮಾಭಿಮಾನವನ್ನು ಮರೆತು ಅವರಲ್ಲಿ ಕ್ಷಮೆ ಕೇಳಿಕೊಳ್ಳುತ್ತಾರೆ. ದೇವರಲ್ಲಿ ಭಯ ಭಕ್ತಿಯುಳ್ಳ ಸೌಮ್ಯ ಸ್ವಭಾವದವರು ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ರಾಮಾಯಣ ಮಹಾಭಾರತಗಳು ಮುಖ್ಯವಾಗಿವೆ. ಕೂಲಿ ಮಠದಲ್ಲಿ ಅಕ್ಷರ ಕಲಿತ ಅವರು ರಾಮಾಯಣ, ಜೈಮಿನಿ ಭಾರತ, ನಳಚರಿತ್ರೆಗಳನ್ನು ಸರಾಗವಾಗಿ ಓದುತ್ತಿದ್ದರು. ಅರ್ಥ ಹೇಳುತ್ತಿದ್ದರು.

ನಂಜೇಗೌಡರ ಪಾತ್ರವನ್ನು ಗಮನಿಸುವಾಗ ಕಂಡು ಬರುವ ಮತ್ತೊಂದು ಪ್ರಮುಖ ಅಂಶ ಜೋಯಿಸರೊಡನೆ ಅವರ ಸ್ನೇಹ ಜೋಯಿಸರು ಮೇಲ್ವರ್ಗದವರು ಅದಕ್ಕೆ ತಕ್ಕಂತೆ ಗೌರವದಿಂದ ನಡೆದುಕೊಂಡು ಅದಕ್ಕೆ ಮೀರಿದ ಸ್ನೇಹವನ್ನು ಈ ಎರಡೂ ಪಾತ್ರಗಳಲ್ಲಿ ಕಾಣುತ್ತೇವೆ. ಇದಕ್ಕಿಂತ ಹೆಚ್ಚಾಗಿ ಈರಬೊಮ್ಮ ನಂಜೇಗೌಡರ ಸ್ನೇಹವೂ ಗಮನಿಸತಕ್ಕ ಅಂಶವಾಗಿದೆ. ನಂಜೇಗೌಡರು ಪಕ್ಕದ ಊರಾದ ಜೋಗಿಪುರಕ್ಕೆ ಪಟೇಲರು. ಪಟೇಲರಾದರೂ ಅವರನ್ನು ಯಾರೂ ಪಟೇಲರೆಂದು ಕರೆಯುತ್ತಿರಲಿಲ್ಲ ದೊಡ್ಡ ಮನೆ ಗೌಡರೆಂದು ಕರೆಯುತ್ತಿದ್ದರು. ಪಟೇಲಿಕೆಯ ಗತ್ತು ನಂಜೇಗೌಡರಲ್ಲಿ ಇರಲಿಲ್ಲ. ದೈವ ಭಕ್ತರಂತೆ ಕಂಡು ಬರುವ ಅವರಲ್ಲಿ ತಾಳ್ಮೆ, ಶಾಂತಿಗಳೇ ಹೆಚ್ಚು, ಹರಿಹರನಲ್ಲಿ ಬೇದ ಮಾಡದ ಭಕ್ತಿ ಅವರಲ್ಲಿ ಕಂಡು ಬರುತ್ತದೆ.

ನಂಜೇಗೌಡರೊಬ್ಬ ಮಣ್ಣಿನ ಮಗನಾಗಿ ಕಂಡು ಬರುತ್ತಾರೆ. ಪಿತ್ರಾರ್ಜಿತವಾಗಿ ಬಂದ ಆಸ್ತಿಯನ್ನು ಹಾಳು ಮಾಡದೆ ಅವುಗಳನ್ನು ರೂಢಿಸಿಕೊಂಡು ಫಲವತ್ತಾಗಿ ಮಾಡಿದ್ದಾರೆ. ದೊಡ್ಡ ಮನೆಗೆ ಅನ್ವರ್ಥವಾಗಿ ದೊಡ್ಡ ವ್ಯಕ್ತಿಯಾಗಿ ಬಾಳಿದ ಗೌಡರು ಸಾಮಾನ್ಯ ಮನುಷ್ಯರಲ್ಲ, ತಮಗೆ ದ್ರೋಹ ಮಾಡುವವರನ್ನು ನಂಬುವಂಥವರು, ಜೀವನದಲ್ಲಿ ಎಲ್ಲಕ್ಕಿಂತ ನೆಮ್ಮದಿ ಮುಖ್ಯವಾಗಿದೆ ಎಂದು ಭಾವಿಸಿದ ಅವರು ಅದನ್ನು ಪಡೆಯಲು ಎಂಥಹ ತ್ಯಾಗಕ್ಕಾದರೂ ಸಿದ್ಧವಾಗಿದ್ದರು.

**ಲಿಂಗೇಗೌಡ:-**

ದೊಡ್ಡ ಮನೆ ಕಾದಂಬರಿಯಲ್ಲಿ ವಿವಾದಕ್ಕೆಡೆ ಕೊಡುವ ಪಾತ್ರವೆಂದರೆ ಲಿಂಗೇಗೌಡರದು, ಲಿಂಗೇಗೌಡರ ಪಾತ್ರಕ್ಕೆ ಹೆಚ್ಚಿನ ಮಹತ್ವ ಕೊಡಲಾಗಿದೆ. ಅದನ್ನು ತಪ್ಪುಗಳೇ ಇಲ್ಲದ ಆದರ್ಶ ಪಾತ್ರವನ್ನಾಗಿಸುವುದು ವಾಸ್ತವಕ್ಕೆ ದೂರವಾಗುವಂತೆ ಮಾಡಿದೆ ಎಂಬುದು ಕೆಲವರ ಅಭಿಪ್ರಾಯ. ಕಾದಂಬರಿಯ ಆಶಯವನ್ನು ಕಾದಂಬರಿಯ ಒಳಗೆ ಆ ಪಾತ್ರ ಪಡೆದುಕೊಳ್ಳುವ ಮಹತ್ವವನ್ನು ಗಮನದಲ್ಲಿಟ್ಟುಕೊಂಡು ಪರಿಶೀಲಿಸಿದಾಗ ಅತಿ ಭಾವುಕತೆಯಿಂದ ಆ ಪಾತ್ರ ಸೊರಗಿದೆಯೇ ಇಲ್ಲ ತನ್ನದೇ ವೈಶಿಷ್ಟ್ಯತೆಯಿಂದ ಕಾದಂಬರಿಯ ಕೇಂದ್ರವಾಗಿದೆಯೇ ಎಂಬುದನ್ನು ನೋಡಬಹುದು.

ಕಾದಂಬರಿಯಲ್ಲಿ ಲಿಂಗೇಗೌಡರರದು ಕೇಂದ್ರ ಪಾತ್ರ ಎರಡನೆಯ ತಲೆಮಾರಿನ ಪಾತ್ರವಿದು. ಮಿಕ್ಕೆಲ್ಲ ಪಾತ್ರಗಳಿಗೂ ಅವುಗಳದ್ದೇ ಆದ ಬೆಳವಣಿಗೆಗೆ ಬಹಳಷ್ಟು ಅವಕಾಶಗಳಿದ್ದರೂ ಕಾದಂಬರಿಕಾರರು ಲಿಂಗೇಗೌಡರ ವ್ಯಕ್ತಿತ್ವದ ಮುಂದೆ ಅವುಗಳನ್ನು ಲಘುವಾಗಿಸಿದ್ದಾರೆ. ಆರಂಭದಲ್ಲೇ ಈ ಪಾತ್ರದ ಗುಣ ಸ್ವಭಾವಗಳು ತಿಳಿಯುತ್ತದೆ. ದೊಡ್ಡ ಮನೆಯನ್ನು ಮುಂದುವರೆಸುವ ಅದನ್ನೇ ಮತ್ತಷ್ಟು ದೊಡ್ಡದಾಗಿ ಮಾಡುವ ಪ್ರತಿಜ್ಞೆಯನ್ನು ಲಿಂಗೇಗೌಡ ಮಾಡುತ್ತಾನೆ. ಕಾದಂಬರಿಯಲ್ಲಿ ತಪ್ಪುಗಳನ್ನೇ ಮಾಡದ ಪಾತ್ರ ಎಂದರೆ ಲಿಂಗೇಗೌಡರು ಎಂಬಂತಿದೆ. ಪ್ರಾಚೀನ ಕಾವ್ಯಗಳಲ್ಲಿ ಬರುವ ಧೀರೋದಾತ್ತ ನಾಯಕರ ರೀತಿ ಈ ಪಾತ್ರ ಚಿತ್ರಣ ನಡೆದಿದೆ. ಈ ಕಾವ್ಯಗಳಲ್ಲಾದರೂ ಸಿಟ್ಟು ಬಂದಾಗ ಆ ಪಾತ್ರಗಳು ಸೆಟೆದುಕೊಂಡು ವರ್ತಿಸುತ್ತವೆ. ಇಲ್ಲಿ ಗೌಡರ ದರ್ಪ, ಸಿಟ್ಟು, ಅನ್ಯಾಯಗಳ ವಿರುದ್ಧ ರೊಚ್ಚಿಗೇಳುವ ಸ್ವಭಾವ ಕಾದಂಬರಿಯಲ್ಲಿ ಎಲ್ಲೆಲ್ಲೂ ಕಾಣುವುದೇ ಇಲ್ಲ. ಹಳ್ಳಿಯ ಸಾಮಾನ್ಯ ರೈತರಿಗೆ ಒಂದೇ ಆದಾಯದ ಮೂಲವನ್ನು ನಂಬಿಕೊಂಡು ಪರದಾಡುವುದನ್ನು ಬಿಟ್ಟು ಬೇರೆ ಬೇರೆ ಮೂಲಗಳನ್ನು ಹುಡುಕಿಕೊಳ್ಳುವಲ್ಲಿ ಲಿಂಗೇಗೌಡರ ಜಾಣತನ, ಪ್ರಗತಿಪರ, ಮನೋಭಾವ ಪ್ರಕಟಗೊಳ್ಳುತ್ತವೆ.

ಕಾದಂಬರಿಯಲ್ಲಿ ತಂದೆಯಂತೆ ಲಿಂಗೇಗೌಡರಲ್ಲೂ ಕೂಡ ಎಂಥ ಕಠಿಣ ಮನುಷ್ಯರನ್ನು ಕೂಡ ಪರಿವರ್ತಿಸಿ ಒಲಿಸಿಕೊಳ್ಳುವ ಒಂಧು ಅಸಾಧಾರಣ ಶಕ್ತಿಯಿತ್ತು. ಗೌರವ, ನಯವಿನಯ ಸದ್ವರ್ತನೆಗಳಿಗೆ ಜನ ಮಾರು ಹೋಗಿದ್ದರೂ ತನ್ನ ಜೀವಮಾನದಲ್ಲಿ ಯಾರಿಗೂ ಒಂದು ಕಾಸು ಬಡ್ಡಿ ಬಿಡದ ದಡಗದ ಹೊನ್ನಯ್ಯ ಎರಡು ಸಾವಿರ ಬಡ್ಡಿ ಬಿಟ್ಟು ಕೊಟ್ಟ ಲಿಂಗೇಗೌಡರ ಲೌಕಿಕ ಬುದ್ಧಿ ಮೆಚ್ಚುವಂತಹದು. ಕಾಲ ಒಂದೇ ರೀತಿ ಇರುತ್ತದೆಂದು ಭಾವಿಸಬಾಗದು. ಇಂದು ಒಂದಾಗಿರುವವರು ನಾಳೆ ತಿರುಗಿ ಬೀಳಬಹುದು ಆಗದವರು ಚಿಕ್ಕಪ್ಪಂದಿರ ತಲೆಕಡಿಸಿ ಲಿಂಗೇಗೌಡ ಎಲ್ಲ ಹಾಳು ಮಾಡಿಬಿಟ್ಟ ಎಂದು ದೂರಬಾರದು ಚಿಕ್ಕಪ್ಪಂದಿರಾಗಲಿ ಅವರ ಮಕ್ಕಳಾಗಲಿ ತನ್ನ ಮೇಲೆ ತಪ್ಪು ತಿಳಿಯಬಾರದೆಂದು ಆಲೋಚಿಸಿ ಬಂಗಲಿ ಸುಬ್ಬೇಗೌಡ ಮಾಡಿದ ಸಾಲ ತೀರುಸುವ ಸಂದರ್ಭದಲ್ಲಿ ಅತ್ತೆಯ ಜಮೀನನ್ನು ಸಾಲ ತೀರಿಸುವಷ್ಟು ದಿನ ತಮ್ಮ ಹೆಸರಿನಲ್ಲಿ ಇರಲೆಂದು ಬರೆಸಿಕೊಂಡರು.

ಕಾದಂಬರಿಕಾರರು ಪ್ರಜ್ಞಾಪೂರ್ವಕವಾಗಿ ಈ ಪಾತ್ರವನ್ನು ಉದಾತ್ತೀಕರಿಸಿದ್ದಾರೆ ಎಂಬ ಅಭಿಪ್ರಾಯವಿದೆ. ಆದರೆ ಕಾದಂಬರಿಕಾರರನ್ನು ಮೀರಿ ಈಪಾತ್ರ ತನ್ನ ತನವನ್ನು ಕಂಡುಕೊಳ್ಳುತ್ತಾ ಹೋಗುತ್ತದೆ. ಅನುಭವಗಳು ಸನ್ನಿವೇಶಗಳು ಈ ಪಾತ್ರದ ಬೆಲವಣೆಗೆಗೆ ಕಾರಣವಾಗುವುದು ಕಾದಂಬರಿಯಲ್ಲಿ ನಿಚ್ಚಳವಾಗಿ ಕಾಣುತ್ತವೆ. ಹಲವಾರು ಜನರ ಒಡನಾಟ ಹಲವಾರು ಊರುಗಳ ತಿರುಗಾಟ ಅವರಲ್ಲಿ ವ್ಯವಹಾರ ಬುದ್ಧಿಯನ್ನು ಸಹಕಾರ ಮನೋಭಾವವನ್ನು ಬೆಳೆಸುತ್ತವೆ.

**ಸಾಹುಕಾರ್ ಆಸ್ತಿಗೌಡ:-**

ಸಾಹುಕಾರ್ ಆಸ್ತಿಗೌಡರದು ಕಾದಂಬರಿಯಲ್ಲಿ ಪ್ರಮುಖ ಪಾತ್ರವಲ್ಲದಿದ್ದರೂ ಗಮನ ಸೆಳೆಯುವ ಪಾತ್ರ 'ನನ್ನೂರಿಗೆ' ಸಮೀಪವಿದ್ದ ಅಳೀಸಂದ್ರದ ಇವರು ನಾಗುವಿನ ಗೆಳೆಯರು, ವಯಸ್ಸಿನ

ಅಂತರವಿದ್ದರೂ ಅದು ಅವರ ಗೆಳೆತನಕ್ಕೆ ಅಡ್ಡಿ ಬಂದಿರಲಿಲ್ಲ. ರಜಾ ದಿನಗಳಲ್ಲಿ ಊರಿಗೆ ಬಂದಾಗ ಅವನ ಆತ್ಮೀಯ ವ್ಯಕ್ತಿಗಳಲ್ಲಿ ಇವರೂ ಒಬ್ಬರು. ಕಾದಂಬರಿಕಾರರು ಪಾತ್ರ ಚಿತ್ರಣದಲ್ಲಿ ಎತ್ತಿದ ಕೈ ಎಂಬುದಕ್ಕೆ ಈ ಪಾತ್ರ ಒಂದು ಉದಾಹರಣೆಯಾಗುತ್ತದೆ. ಕಂಟ್ರಾಕ್ಟ್ ಮಾಡಿಸುವುದರ ಜೊತೆಗೆ ಲೇವಾದೇವಿ ಮಾಡುತ್ತಿರುತ್ತಾರೆ. ಪ್ರಪಂಚದ ಆಗುಹೋಗುಗಳಲ್ಲಿ ಬಹಳ ಆಸಕ್ತಿ ಅದರಲ್ಲೂ ಭಾರತ ಸ್ವಾತಂತ್ರ ಚಳುವಳಿಯ ಬಗ್ಗೆ ಕುತೂಹಲ ಹೊಂದಿದವರು.

ಸಾಹುಕಾರ್ ಆಸ್ತಿಗೌಡರು ಎಂದು ಹೆಸರಾದರೂ, ರಸ್ತೆ ಕಂಟ್ರಾಕ್ಟ್ ಮಾಡಿಸುತ್ತಿದ್ದರೂ, ಕೈಗೆ ಚಿನ್ನದ ಕಪ್ಪ ಹಾಕಿದ್ದರೂ, ಅಂಚೆಯ ಮನೆ ಬೀದಿಯಲ್ಲೇ ಇದ್ದರೂ, ತಿಂಗಳಿಗೆ ಒಂದು ರೂಪಾಯಿ ಎರಡಾಣೆ ಖರ್ಚು ಮಾಡಲು ಮನಸ್ಸು ಬಾರದೆ ನಾಗು ಬೇಸಿಗೆ ರಜಕ್ಕೆ ಬಂದ ಮೂರು ತಿಂಗಳಲ್ಲಿ ವರ್ಷದ ಸುದ್ದಿಯನ್ನೆಲ್ಲಾ ತಿಳಿದುಕೊಳ್ಳುವ ದೊಡ್ಡ ಯೋಜನೆ ಹಾಕಿಕೊಂಡಿದ್ದರು. ಅವರ ಜಿಪುಣತನಕ್ಕೆ ಇದಕ್ಕಿಂತ ಉತ್ತಮ ಉದಾಹರಣೆ ಬೇಕಿಲ್ಲ ಎನಿಸುತ್ತದೆ.

ಆಸ್ತಿಗೌಡರು ಭಾರೀ ಶರೀರ ದೊಡ್ಡ ಹೊಟ್ಟೆ ಹಸಿದಿರಲಿ ಊಟ ಮಾಡಿರಲಿ ಯಾವಾಗಲೂ ತೇಗುತ್ತಿರುವ ಕಾಯಿಲೆ, ಕಾಯಿಲೆ ವಿಚಾರವನ್ನು ಯಾರಾದರೂ ಕೇಳಿದರೆ ಅವರು ಏನೇ ವಾಯುದೇಗಂತೆ! ಇಗೋ ಇಲ್ಲಿ ನಾಭಿಯಿಂದ ಬರುತ್ತದೆ. ಕಣಪ್ಪ! ಎಂದು ಮಲ್ಲು ಶರಟು ಎತ್ತಿ ಗುಡಾಣದಂಥ ಹೊಟ್ಟೆಯಲ್ಲಿ ಗಂಡಾಂತರವಿದ್ದರೆ ಆಗವನ ತಂತಿನಂತೆ ಕಾಣುತ್ತಿದ್ದ ಹೊಕ್ಕಳನ್ನುತೋರಿಸುತ್ತಿತ್ತು. ಇಲ್ಲಿ ಕಾಬಂದರಿಕಾರರ ಪಾತ್ರ ವರ್ಣನೆ ಚಿತ್ರ ರೂಪದಲ್ಲಿ ಕಣ್ಮಂದೆ ಬರುವಂತಿದೆ. ನಿಷ್ಕಲ್ಮಶ ಮನಸ್ಸಿನ ಆಸ್ತಿಗೌಡ ಹಾಗೂ ಚಿಕ್ಕ ವಯಸ್ಸಿನ ನಾಗುವಿನೊಂದಿಗಿನ ಸ್ನೇಹ ಮೆಚ್ಚ ತಕ್ಕ ಅಂಶ. ಹಳ್ಳಿಯ ಯಾವುದೇ ಮೂಲೆಯಲ್ಲಿದ್ದರೂ ಅವರ ಗಾಂಧೀ ಭಕ್ತಿ ಅಚ್ಚರಿ ಪಡಬೇಕಾದ ಸಂಗತಿಯಾಗಿದೆ. ಗಾಂಧೀ ಪ್ರಭಾವ ಎಷ್ಟರ ಮಟ್ಟಿಗೆ ಹಳ್ಳಿಗಳನ್ನು ತಲುಪಿತ್ತು ಎಂಬ ಅಂಶ ಇದರಿಂದ ತಿಳಿದು ಬರುತ್ತದೆ. ಕಾದಂಬರಿಕಾರರು ನಿರೀಕ್ಷಣಾ ಸಾಮರ್ಥ್ಯಕ್ಕೆ ಈ ಪಾತ್ರ ಅತ್ಯುತ್ತಮ ಉದಾಹರಣೆಯಾಗಿದೆ.

**ಈರಬೊಮ್ಮ:-**

ಈರಬೊಮ್ಮ ದೊಡ್ಡ ಮನೆಯ ಶ್ರೇಯಸ್ಸನ್ನು ಬಯಸುವ ವ್ಯಕ್ತಿಗಳಲ್ಲಿ ಒಬ್ಬನಾಗಿದ್ದಾನೆ, ಗೌಡರ ಆಪ್ತ ವಲಯದಲ್ಲಿದ್ದ ವ್ಯಕ್ತಿಗಳಲ್ಲಿ ಬಹು ಮುಖ್ಯ ಪಾತ್ರ ಇವನದು. ನಂಜೇಗೌಡರ ಸಮಕಾಲೀನ ಜೀವನದಲ್ಲಿ ಹೆಚ್ಚಿನ ಆಸೆಗಳನ್ನು ಇಟ್ಟುಕೊಳ್ಳದೆ ಇದ್ದುದರಲ್ಲಿ ತೃಪ್ತಿ ಪಟ್ಟುಕೊಳ್ಳುವವನು ಈರಬೊಮ್ಮ ಮತ್ತು ಅವನ ಮಗ ಗೆಂಡೇಕಾಳ. ಈರಬೊಮ್ಮ ಊರಿನ ಕುಲವಾಡಿ ಆದರೂ ಪಟೇಲನಿಗಿಂತ ಹೆಚ್ಚಿನ ಒಡನಾಟ ದೊಡ್ಡ ಮನೆಯ ಗೌಡರೊಂದಿಗೆ! ಪ್ರಾಮಾಣಿಕ ಸೇವಕ.

ಹೊಲೆಯನಾದರೂ ಈರಬೊಮ್ಮ ಅನುಭವದಲ್ಲಿ ತಿಳುವಳಿಕೆಯಲ್ಲಿ ಯಾರು ಅವನ ಸಮನಾಗಲಾರರು. ಬೆಳ್ಳೂರು ನಂಜೇಜೋಯಿಷರ ಮನೆಗೆ ಗೌಡರೊಂದಿಗೆ ಹೋದಾಗ ಅಲ್ಲಿ ಜೋಯಿಷರು ಗೌಡರು ಊಟ ಮಾಡುವಾಗಲೇ ಅವನಿಗೂ ಏಕಕಾಲದಲ್ಲೇ ಹೊರಗೆ ಬಡಿಸುತ್ತಾರೆ. ಇದು ಪದ್ಧತಿಗೆ ವಿರುದ್ಧವಾದರೂ ಜೋಯಿಷರಿಗೂ ಈರಬೊಮ್ಮನ ಮೇಲೆ ಬಹಳ ವಿಶ್ವಾಸ. ಊಟ ಮಾಡಿ ಊರಿಗೆ ಬರುವಾಗ ಗೌಡರ ಜೊತೆಯಲ್ಲಿ ಜೋಯಿಷರು ಹೆಚ್ಚಿನ ದಿನ ಇರಲಾರರೆಂದು ಹೇಳುತ್ತಾನೆ. ಈವತ್ತು ಬಡಿಸಿದ ಊಟ ಹಾಕಿದ ವಡೆ ಬಹಳ ರುಚಿಯಾಗಿತ್ತು. ಅವರ ತಿಥಿಗೆ ತಾವು ಹೋಗಲು ಆಗುವುದಿಲ್ಲ. ಅದಕ್ಕೆ ಜೋಯಿಸರು ತಮ್ಮ ಅನ್ನದ ಋಣವನ್ನು ಈ ರೀತಿ ತೀರಿಸಿಕೊಂಡರೆಂದು ಹೇಳುತ್ತಾನೆ. ಗೌಡರು ತಮಗಿಂತ ವಯಸ್ಸಿನಲ್ಲಿ ಹಿರಿಯನಾದ ಆದರೆ ಕೀಳು ಕುಲದವನೆಂದು ಕರೆಯಲ್ಪಡುವ ಈರಬೊಮ್ಮನನ್ನು ಎಂದೂ 'ಈರಬೊಮ್ಮ' ಎನ್ನುವದಿಲ್ಲ. 'ಈರಬೊಮ್ಮಣ್ಣ' ಎಂದು ಕರೆಯುತ್ತಾರೆ.

ಗೌಡರಿಗೆ ಮನೆಯವರಿಗಿಂತ ಹೊರಗಿನವರೆ ಆಪ್ತರು. ಗೌಡರ ಆಪ್ತ ವಲಯಗಳಿಗೆ ಈರಬೊಮ್ಮ ಅವನ ಮಗ ಗೆಂಡೇಕಾಳ ಪ್ರಮುಖರು. ಕೊನೆಯವರೆಗೂ ಗೌಡರಿಗೆ ಮತ್ತು ಈರಬೊಮ್ಮ, ಗೆಂಡೇಕಾಳರಿಗಿರುವ ಆತ್ಮೀಯತೆ ಈ ಕಾದಂಬರಿಯ ಒಂದು ವಿಶೇಷ.

ಈರಬೊಮ್ಮ ನಂಜೇಗೌಡರು ಮರಣಿಸಿದಾಗ ದುಃಖಿಸುತ್ತಿದ್ದ ಮಗ ಲಿಂಗೇಗೌಡರಿಗೆ ಅನುಭವದಿಂದ ಹೇಳಿದ ಮಾತುಗಳು ನಿಜವಾಗುತ್ತವೆ. ಊರನ್ನೇ ನಡುಗಿಸಿದ ಬೆಂಕಿಜ್ವರ ಈರಬೊಮ್ಮನನ್ನು ಆಹುತಿ ತೆಗೆದುಕೊಳ್ಳುತ್ತದೆ. ಇವನಂತೆಯೇ ಮಗನಾದ ಗೆಂಡೇಕಾಳ ಗೌಡರ ಬಂಟನಾಗುತ್ತಾನೆ.

**ಗೆಂಡೇಕಾಳ:–**

ಬಯಲು ಸೀಮೆಯ ಬದುಕಿನಲ್ಲಿ ಊರಿನ ಕುಳವಾಡಿಗಳಿಲ್ಲದೆ ಯಾವ ಕೆಲಸವೂ ನಡೆಯುವುದಿಲ್ಲ. ಶುಭ, ಅಶುಭ ಕೆಲಸಗಳಲ್ಲಿ ಇವರದೇ ಪ್ರಮುಖ ಪಾತ್ರ. 'ದೊಡ್ಡ ಮನೆ' ಕಾದಂಬರಿಯಲ್ಲಿ ಕೇಡು ಮಾಡದೇ ಒಳ್ಳೆಯತನದಿಂದ ಬದುಕಿದವರು ಇವರಿಬ್ಬರ, ವ್ಯಕ್ತಿತ್ವದಲ್ಲಿ ಒಂದಾದರೂ ದೋಷ ಕಾಣುವುದಿಲ್ಲ. ಇವರ ಅನಂತರದ ಪೀಳಿಗೆಯಾದ 'ನಾಗು'ವಿನಲ್ಲೂ ಹಾಗೇ ಸಾತ್ವಿಕ ಗುಣಗಳು ಕಾಣಿಸಿಕೊಳ್ಳುತ್ತವೆ. ಒಂದು ಕಡೆಯೂ ಈ ಮೂರು ಪಾತ್ರಗಳು ಅಪ್ಪಿತಪ್ಪಿಯೂ ಒಂದು ತಪ್ಪನ್ನು ಮಾಡದಿರುವಷ್ಟರ ಮಟ್ಟಿಗೆ ಕಾದಂಬರಿಯಲ್ಲಿ ಎಚ್ಚರಿಕೆಯನ್ನು ವಹಿಸಲಾಗಿದೆ.

'ನಾಗು'ಒಕ್ಕಲಿಗರ ಮನೆತನದ ಒಟ್ಟು ಕುಟುಂಬದಲ್ಲಿ ಜನಿಸಿದರಿಂದ ಆಯಾಸವಾಗಿ ಅಪಾರ ಅನುಭವ, ಸೃಷ್ಟಿ ಕ್ರಿಯೆಯಲ್ಲಿ ಪಾಲ್ಗೊಳ್ಳುವ ಅವಕಾಶ ದೊರೆಯುತ್ತದೆ. ಚಿಕ್ಕಂದಿನಲ್ಲಿ ತಾಯನ್ನು ಕಳೆದುಕೊಂಡ 'ನಾಗು' ಅಜ್ಜಿಯ ಮಡಿಲನ್ನು ಸೇರುತ್ತಾನೆ. ತಂದೆಯ ಮರು ಮದುವೆ

ಮಾಡಿಕೊಂಡಿದ್ದರಿಂದ ಅವನು ತಂದೆಯ ಒಡನಾಟದಿಂದ ವಂಚಿತನೆ. ಏಕಾಂಗಿತನ ವಯಸ್ಸಿಗೆ ಮೀರಿದ ಅನುಭವ ತಿಳುವಳಿಕೆಯನ್ನು ತಂದು ಕೊಡುತ್ತದೆ. ಜೋಗಿಪುರದ ಮೇಷ್ಟ್ರು ಕೂಲಿ ಮಠದ ಮೂಲಕ ಆರಂಭವಾದ ವಿದ್ಯಾಭ್ಯಾಸ ನಿರಂತವಾಗಿ ಸಾಗುತ್ತದೆ.

ನಾಗು ಓದಿನಲ್ಲಿ ಯಾವಾಗಲೂ ಮುಂದು ಊರಿಗೆ ಬರುವ ಅಮಲ್ದಾರರು ಅವರಿಗೆ ಸಿಗುತ್ತಿದ್ದ ಗೌರವ, ಕುದುರೆ ಸವಾರಿಗಳು, ಅವನ ಮನಸ್ಸಿನಲ್ಲಿ ಆಸೆಯನ್ನುಟ್ಟಿಸಿರುತ್ತದೆ. ಜೊತೆಗೆ ಲಿಂಗೇಗೌಡರ ಆಶಯವೂ ಕೂಡ ತನ್ನ ಮಗನನ್ನು ಅಮಲ್ದಾರರನ್ನಾಗಿ ಮಾಡಬೇಕೆಂಬುದೇ ಆಗಿತ್ತು. ಈ ಹಿನ್ನೆಲೆಯು ಅವನಲ್ಲಿ ಓದುವ ಹುಚ್ಚು ಹುಟ್ಟುವುದಕ್ಕೆ ಕಾರಣವಾಯಿತು. ನಾಗುವಿನ ಬಾಲ್ಯ ಎಂಬ ಅಧ್ಯಾಯ ಕಾದಂಬರಿಯ ಒಳಗಿದ್ದರೂ, ಹೊರಗಿದ್ದರೂ ಒಂದು ಶ್ರೇಷ್ಠ ಅಧ್ಯಾಯವಾಗಿದೆ. ಈ ಅಧ್ಯಾಯದಲ್ಲಿ ಬಾಲಕ ನಾಗುವಿನ ಕುತೂಹಲವನ್ನು ಅದರ ಮೂಲಕ ಅವನು ಪಡೆದಕೊಳ್ಳುವ ಸೂಕ್ಷ್ಮ ಸಂವೇದನೆಯನ್ನು ಲೇಖಕರು ಕಣ್ಣಿಗೆ ಕಟ್ಟುವಂತೆ ಚಿತ್ತಿಸಿದ್ದಾರೆ. ರಂಗೇಗೌಡ 'ನಾಗುವಿನ ಮನಸ್ಸನ್ನು ಕೆಡಿಸಲು ಪ್ರಯತ್ನಿಸುತ್ತಾನೆ. ಲಿಂಗೇಗೌಡರು ನಾಲ್ಕನೆ ಮದುವೆಯಾದಾಗ ಬೆಳೆದ ಮಗನನ್ನು ಬಿಟ್ಟು ಗೌಡರು ಮದುವೆಯಾಗುವುದನ್ನು ಕುರಿತು ನಾಗುವನ್ನು ಗೌಡರ ವಿರುದ್ಧ ಎತ್ತಿ ಕಟ್ಟಲು ಪ್ರಯತ್ನಿಸಿ ವಿಫಲನಾಗುತ್ತಾನೆ.

ಹಳ್ಳಿಯಲ್ಲಿ ಹುಟ್ಟಿ ಬೆಳೆದು ಸಮೃದ್ಧ ಅನುಭವವನ್ನು ಪಡೆದುಕೊಂಡಿದ್ದರೂ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಪಟ್ಟಣ ಸೇರಿದ ನಂತರ ಹಳ್ಳಿಯ ಬದುಕಿನೊಂದಿಗೆ ಬೆರೆಯಲು ಸಾಧ್ಯವಾಗದೆ ಅದನ್ನು ದೂರ ನಿಂತು ಗಮನಿಸುತ್ತಿರುವುದನ್ನು ಲೇಖಕರು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಕಾದಂಬರಿಯಲ್ಲಿ ನಾಗುವಿನ ಬಾಲ್ಯ ಅತ್ಯಂತ ಪ್ರಮುಖ ಅಧ್ಯಾಯವಾಗಿದೆ. ಈ ಅಧ್ಯಾಯದಲ್ಲಿ ಹಳ್ಳಿಯ ಬಾಲಕನೊಬ್ಬನಿಗೆ ದೊರೆಯುವ ಅನುಭವ, ಸಮೃದ್ಧಿ ನಿಸರ್ಗದೊಡನೆ ಒಡನಾಟ, ವಯಸ್ಸಿಗೆ ಮೀರಿದ ತಿಳುವಳಿಕೆ ಇವುಗಳು ಓದುಗರ ಮನಸ್ಸಿನಲ್ಲಿ ದಟ್ಟುವಾಗಿ ಉಳಿಯುತ್ತದೆ.

**ಚಿಕ್ಕಮ್ಮ:-**

ಚಿಕ್ಕಮ್ಮ ಕೋಡಿಹಳ್ಳಿ ಅಯ್ಯನ ಮಗಳು, ಚಿಕ್ಕ ವಯಸ್ಸಿಗೆ ದೊಡ್ಡ ಮನೆಯ ಸೊಸೆಯಾಗಿ ಬಂದು ಆ ಮನೆಯನ್ನು ಕಟ್ಟುವುದಕ್ಕೆ ಶ್ರಮ ಪಟ್ಟವಳು ಕೂಡು ಕುಟುಂಬದಲ್ಲಿ ಅವಳಿಗೆ ನಂಜೇಗೌಡರ ಪ್ರೀತಿಯೊಂದೇ ಆಧಾರ. ದೊಡ್ಡ ಮನೆಯ ಯಜಮಾನಿಯಂತೆ ದರ್ಪ ತೋರಿಸದಿದ್ದರೂ ಓರಗಿತ್ತಿಯರು, ಸೊಸೆಯಂದಿರನ್ನೆಲ್ಲಾ ಕೂಡಿಸಿ ಒಟ್ಟಾಗಿ ಮನೆಯನ್ನು ನಡೆಸಿಕೊಂಡು ಹೋಗುವ ಸಮರ್ಥ ಹೆಂಗಸು ಹಠ ಸಾಧಿಸುವ ಗುಣವಿಲ್ಲ. ಹೊಂದಾಣಿಕೆಯ ಸ್ವಭಾವದ ಹೆಂಗಸು. ತಮ್ಮ ಮಗ ಲಿಂಗೇಗೌಡ ಮತ್ತು ದಾಯಾದಿ ಮಗ ರಂಗೇಗೌಡ ಜಗಳವಾಡಿ ಎರಡು ಮನೆಗಳಿಗೂ ಮನಸ್ತಾಪ ಉಂಟಾದುದಕ್ಕೆ ವ್ಯಥೆ ಪಡುತ್ತಾಳೆ. ಆ ಮನಸ್ತಾಪವನ್ನು ನಂಜೇಗೌಡರು ಕ್ಷಮೆಯಾಚನೆಯ ಮೂಲಕ ದೂರ ಮಾಡಿದಾಗ ಸಂತೋಷ ಪಡುತ್ತಾಳೆ. ಆ ಸಂದರ್ಭದಲ್ಲಿ ಈ ಮಾತುಗಳು ಚಿಕ್ಕಮ್ಮನ

ಸ್ವಭಾವವನ್ನು ಚೆನ್ನಾಗಿ ತಿಳಿಸುತ್ತದೆ. "ಹೌದು! ಸಧ್ಯ ನಿಸೂರಾಯ್ತು ಬುಡಿ ಯಾರೂ ದಿನ ಬೆಳಗೆದ್ರೆ ನಾಯಂಗೆ ಕಚ್ಚಾಡ್ಕೊಂಡಿರೋರು! ಎದ್ರೆ ಬಿದ್ರೆ ಅವಮುಖ ನಾಮ ನೋಡ್ಬೇಕು, ನಮ್ಮುಕ್ಕ ಅವರ್ನೋಡಬೇಕು, ಗಂಡಸ್ರಾದ್ರೆ ಒಂಥರ ಆದ್ರೆ ಹೆಂಗಸರು ಹಿಂಗಿರಾಕಾದತ್ತೆ? ಬಸಿರಲಿ ಬಾಣಂತೀಲಿ ಎಲ್ಲಾ ಕಾಲಕ್ಕೂ ಹೆಂಗಸಿಗೆ ಹೆಂಗಸು ಬೇಕು ಚಂದಾಯ್ತಾ ಬಿಡಿ"[೧] ಎನ್ನುತ್ತಾಳೆ.

**ಹುಚ್ಚಮ್ಮ:-**

ದೊಡ್ಡ ಮನೆ ಲಿಂಗೇಗೌಡರ ಹಿರಿಯ ಹೆಂಡತಿ. ಬಂಗಲಿ ಸುಬ್ಬೇಗೌಡರ ಮಗಳು ಹುಚ್ಚಮ್ಮ. ಈಕೆ ಹಳ್ಳಿಯ ಅವಿಭಕ್ತ ಕುಟುಂಬದಲ್ಲಿನ ಸೊಸೆಯರನ್ನು ಪ್ರತಿನಿದಿಸುತ್ತಾಳೆ. ಅಂದು ಬಾಲ್ಯ ವಿವಾಹ ಸಾಮಾನ್ಯವಾಗಿತ್ತು. ಚಿಕ್ಕ ವಯಸ್ಸಿಗೆ ವಿವಾಹವಾಗಿ ದೊಡ್ಡಮನೆ ಸೇರಿದ ಹುಚ್ಚಮ್ಮ ದೊಡ್ಡಮನೆಯ ಶ್ರೇಯಸ್ಸಿಗಾಗಿ ತಾನು ಸಾಯುವವರೆಗೂ ದುಡಿಯುತ್ತಾಳೆ. ವ್ಯವಸಾಯ, ಮನೆ, ಕೆಲಸ, ಹೊಸಮನೆ ಕಟ್ಟುವ ಕೆಲಸಗಾರರ ಕೆಲಸ ಹೀಗೆ ದೊಡ್ಡಮನೆಯ ಹಿರಿಯ ಸೊಸೆಯಾಗಿ ಅದರ ಶ್ರೇಯಸ್ಸಿಗಾಗಿ ಹಗಲಿರುಳು ಬೇಸರಿಸದೇ ದುಡಿಯುತ್ತಾಳೆ.

**ನಾಗು:-**

ದೊಡ್ಡ ಮನೆ ಕಾದಂಬರಿಯಲ್ಲಿ ನಂಜೇಗೌಡರ ಕತೆ ಮೊದಲ ತಲೆಮಾರಿನದು, ಲಿಂಗೇಗೌಡರ ಕಥೆ ಎರಡನೆಯ ತಲೆಮಾರಿನದಾದರೆ, ಮೂರನೇಯ ತಲೆಮಾರನ್ನು ಪ್ರತಿನಿಧಿಸುತ್ತೆ 'ನಾಗು'ವಿನದು. ಎರಡನೆಯ ತಲೆಮಾರಿನ ಲಿಂಗೇಗೌಡರು ಕಾದಂಬರಿಯ ಕೇಂದ್ರ ಬಿಂದುವಾಗಿರುವುದರಿಂದ ಅದಕ್ಕಿರುವ ಒತ್ತು 'ನಾಗು'ವಿನ ಪಾತ್ರಕ್ಕೆ ದಕ್ಕಿಲ್ಲ. ಈ ಪಾತ್ರ ಕಾದಂಬರಿಯ ಹೊರಗೆ ಉಳಿದಿರುವಂತೆ ಕಾಣುತ್ತದೆ. ಆದರೂ 'ನಾಗು'ವಿನ ಬಾಲ್ಯದ ಚಿತ್ರಣ ಕಾದಂಬರಿಯ ಅತೀ ಮುಖ್ಯ ಭಾಗವಾಗುತ್ತದೆ. ಕಾದಂಬರಿಯ ಜೊತೆ ಜೊತೆಯಲ್ಲೇ ಈ ಪಾತ್ರವೂ ತನ್ನದೇ ಆದ ರೀತಿಯಲ್ಲಿ ಗಮನಾರ್ಹವಾಗುತ್ತದೆ. ದೊಡ್ಡಮನೆಯಲ್ಲಿ ನಲ್ವತ್ತು, ಐವತ್ತು ಜನರ ಅದಕ್ಕೆ ತಕ್ಕಂತೆ ದನಕರು, ಆಳುಕಾಳು ವ್ಯವಸಾಯ, ಗೌಡರ ತಮ್ಮಂದಿರಿಗೆ ಇನ್ನೂ ಮದುವೆಯಾಗಿಲ್ಲದಿದ್ದರಿಂದ ಮನೆಯಲ್ಲಿ ಸೊಸೆ ಇವಳೊಬ್ಬಳೇ, ಅತ್ತೆ. ಚಿಕ್ಕಮ್ಮ ಒಳ್ಳೆಯವಳಾದರೂ ದೊಡ್ಡ ಮನೆ ಕೆಲಸದ ಹೊರೆ ಸೊಸೆ ಹೊರಲಾರದಷ್ಟು ದೊಡ್ಡದು. ಅವಿಭಕ್ತ ಕುಟುಮಬಗಳು ಸಮಾಜ ಶಾಸ್ತ್ರಜ್ಞರ ಅಧ್ಯಯನಕ್ಕೆ ವಸ್ತುವಾಗುತ್ತಿದೆ. ಅಂದಿನ ಸಂದರ್ಭಗಳಲ್ಲಿ ಹೆಂಗಸರು ಯಾವ ರೀತಿ ಜವಾಬ್ದಾರಿ ನಿರ್ವಹಿಸುತ್ತಿದ್ದರೆಂಬುದಕ್ಕೆ ಈ ಪ್ರಾದೇಶಿಕ ಕಾದಂಬರಿಯಲ್ಲಿ ವಿಪುಲವಾಗಿ ಮಾಹಿತಿ ದೊರೆಯುತ್ತದೆ.

---

೧. ದೊಡ್ಡಮನೆ – ಪುಟ.೩೩

**ರತ್ನ:-**

ಹುಚ್ಚಮ್ಮ ದೊಡ್ಡಮನೆಯ ಶ್ರೇಯಸ್ಸಿಗೆ ತನ್ನ ವೈಯಕ್ತಿಕ ಸುಖ-ಸಂತೋಷವನ್ನೆಲ್ಲಾ ಬಿಟ್ಟು ದುಡಿಯುವ ಮನಸ್ಸಿನವಳಾದರೆ ರತ್ನ ದೊಡ್ಡ ಮನೆಯ ಹಿತಕ್ಕಿಂತ ತನ್ನ ಹಿತ ಮುಖ್ಯವೆಂದು ಭಾವಿಸುವ ಮನಸ್ಸಿನವಳಾಗಿರುತ್ತಾಳೆ ಇದಕ್ಕೆ ಇವಳು ಬೆಳೆದ ವಾತಾವರಣ ಕಾರಣವೋ ಅಥವಾ ಅವರ ಮನಸ್ಥಿತಿಗಳು ಕಾರಣವೋ ಎಂಬುದು ತಿಳಿಯಬೇಕಾದ ವಿಷಯ. ರತ್ನ ಕಾದಂಬರಿಯಲ್ಲಿ ಬರುವ ಪಾತ್ರಗಳಲ್ಲಿ ಅತಿಮುಖ್ಯವಾದ ಪಾತ್ರ ಕೆಂಗಣ್ಣನ ಹೆಂಡತಿ. ದೊಡ್ಡ ಮನೆ ಸೊಸೆಯಂದಿರಲ್ಲಿ ಒಬ್ಬಳು ಇತರ ಸೊಸೆಯರಲ್ಲಿ ಕಾಣದ ಸ್ವತಂತ್ರ ಮನೋವೃತ್ತಿ, ವೈಯಕ್ತಿಕ ಸುಖದ ಅಪೇಕ್ಷೆ ಇವಳಲ್ಲಿ ಹೆಚ್ಚು, ಇದಕ್ಕೆ ಇವಳು ಪೇಟೆಯಲ್ಲಿ ಬೆಳೆದದ್ದು ಕಾರಣ ಹಳ್ಳಿಯಲ್ಲಿ ಹುಟ್ಟಿ ಬೆಳೆದವರಿಗೆ ಹಳ್ಳಿಯ ಬದುಕಿನ ರೀತಿರಿವಾಜುಗಳು ಹುಟ್ಟನಿಂದಲೇ ಬಂದು ಬಿಟ್ಟಿರುತ್ತವೆ. ಮೈಸೂರು ಪಟ್ಟಣದಲ್ಲಿ ಬೆಳೆದ ರತ್ನಳಿಗೆ ಹಳ್ಳಿಯ ಸಾಂಘಿಕ ಬದುಕಿನ ಹಿರಿಮೆಗರಿಮೆಗಳು ತಿಳಿಯಲು ಸಾಧ್ಯವಿಲ್ಲ. ತನ್ನ ಥಳಕು ಬದುಕಿನಿಂದ ದೊಡ್ಡಮನೆ ಕೆಂಗಣ್ಣನನ್ನು ಸೆರೆ ಹಿಡಿಯುತ್ತಾಳೆ ಮಾರಿ ಹಬ್ಬದ ದಿನ ಉರಿಯುವ ಪಂಜಿನ ಬೆಳಕಿನಲ್ಲಿ ಆರಂಭವಾದ ಇವರ ಪ್ರೇಮ ಕಾದಂಬರಿಯ ಉದ್ದಕ್ಕೂ ಸಾಂಕೇತಿಕವಾಗಿ ದೊಡ್ಡ ಮನೆಯ ಅವನತಿಯನ್ನು ಧ್ವನಿಸುತ್ತದೆ. ಮಾರಿಹಬ್ಬದಲ್ಲಿ ಕುರಿಗಳು ಬಲಿಯಾಗುವಂತೆ ಈ ಗಂಡ ಹೆಂಡಿರ ವೈಯಕ್ತಿಕ ಸುಖಕ್ಕೆ ದೊಡ್ಡ ಮನೆಯ ಜನಗಳು ಬಲಿಯಾಗುತ್ತಾರೆ. ಯಾರಿಗೂ ಹೆದರದ ಲಿಂಗೇಗೌಡರು ಕೆಂಗಣ್ಣನ ಮೇಲಿನ ಪ್ರೀತಿಯಿಂದ ರತ್ನಗಳನ್ನು ತಮ್ಮ ಮನೆಯ ಸೊಸೆಯನ್ನಾಗಿ ಮಾಡಿಕೊಳ್ಳುತ್ತಾರೆ. ಕೆಲವು ದಿನ ಇವರಿಬ್ಬರೂ ಸಂತೋಷವಾಗಿ ಕಾಲ ಕಳೆಯುತ್ತಾರೆ. ಗೌಡರು ರತ್ನಳ ಬಾಣಂತನವನ್ನು ಬಹಳ ಅಚ್ಚು ಕಟ್ಟಾಗಿ ಹೊತ್ತ ತಾಯಿಯು ನಾಚುವಂತೆ ಮಾಡಿಸುತ್ತಾರೆ. ಈ ಔದಾರ್ಯ ನೋಡಿ ರತ್ನಳಿಗೆ ಗೌಡರ ಮೇಲೆ ಅಭಿಮಾನವುಂಟಾಗುತ್ತದೆ. ಆದರೆ ಈ ಅಭಿಮಾನ ಗಂಡ ಹೆಂಡತಿಯಲ್ಲಿ ಹೆಚ್ಚು ದಿನ ಉಳಿಯುವುದಿಲ್ಲ. ಪೇಟೆ ಹೆಣ್ಣು ರತ್ನ ತನ್ನ ಸೋದರ ಮಾವನ ಮಾತುಗಳಿಗೆ ಬಹಳ ಬೇಗ ಮರುಳಾಗುತ್ತಾಳೆ. ರಂಗೇಗೌಡ ರತ್ನಳನ್ನು ಅಸ್ತ್ರವನ್ನಾಗಿ ಮಾಡಿಕೊಂಡು ದೊಡ್ಡ ಮನೆಯ ಮೇಲೆ ಪ್ರಯೋಗಿಸುತ್ತಾನೆ.

ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯಲ್ಲಿ ಒಂದೊಂದು ಭಾವಕ್ಕೆ ತಕ್ಕುದಾದ ಒಂದೊಂದು ಪಾತ್ರಗಳನ್ನು ಇವರು ಸೃಷ್ಟಿಸುತ್ತಾರೆ. ಆ ಪಾತ್ರಗಳನ್ನು ಪೂರ್ಣವಾಗಿ ಬೆಳೆಸಿ ಬರುವ ಅವಸ್ಥಾಂತರಗಳನ್ನು ದಾಟಿಸಿ ಬಯಸಿದ ಅಂತ್ಯದ ಕಡೆಗೆ ಕಳಿಸುತ್ತಾರೆ. ಅವರ ಭಾವಗಳನ್ನು ಅಭಿವ್ಯಕ್ತಿಸುವ ಸಂದರ್ಭಗಳನ್ನು ಸೃಷ್ಟಿಸುವಾಗಿನ ಕಾದಂಬರಿಕಾರರ ಕಲಾತ್ಮಕತೆ ಮೆಚ್ಚುವಂತಹದು. ಉದಾ: ಕುಂಡಪ್ಪ, ಗುರುಸಿದ್ದಯ್ಯನವರು , ಸಂಗಣ್ಣ, ಚಿಕ್ಕೀರ, ಮಾರ್ತಾಂಡ ಚಾರ್, ಕುರಿಕೆಂಚಯ್ಯ ಈ ಮುಂತಾದವರನ್ನು ಗಮನಿಸಬಹುದು. ಚಿಕ್ಕೀರನಂಥ ಪಾತ್ರಗಳನ್ನು ಈ ಕಾದಂಬರಿಯ ಪರಿಸ್ಥಿಯಲ್ಲಿ

ಕಡೆಗಣಿಸಿಬಹುದಾಗಿದ್ದರೂ ಅದನ್ನು ಅದರ ಪರಿಸ್ಥಿತಿಯಲ್ಲಿಯೇ ಔಚಿತ್ಯವರಿತು ಬೆಳೆಸಿರುವುದು ಕಾದಂಬರಿಕಾರರ ಜೀವನಾನುಭವದ ಆಳವನ್ನು ಮೆಚ್ಚುವಂತಾಗಿದೆ. ಪ್ರಾಸಂಗಿಕವೆನಿಸಿದರೂ ಕುರಿಕೆಂಚಯ್ಯನ ಪಾತ್ರ ಕಾದಂಬರಿಯಲ್ಲಿ ಒಂದು ಉಪಖ್ಯಾನದಂತೆ ಬೆಳೆದು ನಿಂತಿದೆ. ಬಸವಪುರಾಣದಲ್ಲಿನ ಕೋಳೂರು ಕೊಡಗೂಸಿನ ಕಥೆಯ ರೀತಿಯಲ್ಲಿ ಕುರಿಕೆಂಚಯ್ಯ ಒಬ್ಬ ಮುಗ್ದ ಭಕ್ತನಾಗಿ ಕಂಡು ಬರುತ್ತಾನೆ. ಅವನ ಭಕ್ತಿಯ ಅತಿರೇಕವನ್ನು ವರ್ಣಿಸುವಾಗಿನ ಭಾಷೆ ಮತ್ತು ಭಾವದ ಅವೇಶಗಳು ಮನಮುಟ್ಟುವಂತಿದೆ. ಕುರಿಕೆಂಚಯ್ಯ ತನ್ನ ಭಕ್ತಿಯನ್ನು ಪ್ರದರ್ಶಿಸುವುದು ಒಂದು ಸಾಮಾಜಿಕ ಧಾರ್ಮಿಕ ಮುಗ್ಧತನದಂತಿದ್ದರೂ ಪರಿಸರ ಸಾಮ್ಯಾನತೆಯಿಂದ ಮಹತ್ವದ ಸಂದರ್ಭವೇ ಆಗಿ ಬಿಡುತ್ತದೆ.

ಗುರುಸಿದ್ದಯ್ಯನವರ ಮಗ ಗುರುಮಲ್ಲಯ್ಯ ಅಪ್ಪನಂಥ ಮಗನಾಗಲು ಒದಗುವ ಸಂದರ್ಭ ಸಾಧಾರಣವಾದುದಾದರೂ ಅಸಾಧಾರಣ ಮತ್ತು ಅದ್ಬುತ ಪವಾಡವೆನ್ನುಷ್ಟರ ಮಟ್ಟಿಗೆ ಬೆಳೆದು ನಿಲ್ಲುತ್ತದೆ. ಇಲ್ಲಿ ಕಾದಂಬರಿಕಾರರು ಸಂದರ್ಭವನ್ನು ಪವಾಡವಾಗಿ ವರ್ಣಿಸದೆ ಅದರ ವಸ್ತುಸ್ಥಿತಿಯ ಎರಡು ಮುಖಗಳನ್ನು ಮುಕ್ತವಾಗಿ ವರ್ಣಿಸಿದ್ದಾರೆ. ಉದಾಹರಣೆಗೆ " ನಾನು ಗೋಹತ್ಯೆ ಮಾಡಿ ಬುಟ್ಟೆ, ಇಂಥ ಪಾಪ ಮಾಡಿ ನಾನೀಧರೆ ಮ್ಯಾಲಿರಲಾರೆ, ನಾಲಗೆ ಇರಕೊಂಡು ಪ್ರಾಣ ಬುಟ್ಟು ಬುಡ್ತೀನಿ! ಯಾರೂ ತಡೀಬ್ಯಾಡಿ ಒಂದೂ ಮಾತಾಡಬ್ಯಾಡ ಎಂದು ಹೇಳಿ ಎದ್ದು ನಿಂತು ಸತ್ತ ಎತ್ತಿಗೆ ಉತ್ತರ ಕ್ರಿಯೆ ಮಾಡಿದರು. ನೀರೆರಚಿ ಕೊಂಬಿಗೆ ವಿಭೂತಿ ಹಚ್ಚಿ ಬಿಲ್ಪತ್ರೆ ಹಾಕಿದರು, ಊರಿನವರು ಸ್ವಲ್ಪದೂರದಲ್ಲಿ ಎತ್ತನ್ನು ಹೂಳಲು ದೊಡ್ಡ ಗುಂಡಿಯೊಂದನ್ನು ಅಗೆಯುತ್ತಿದ್ದರು. ಗುರುಮಲ್ಲಯ್ಯನವರು ಮತ್ತೆ ಬಂದು ಕುಳಿತರು. ಶಿವಾ ನನ್ನಲ್ಲಿ ಸತ್ಯ ಇದ್ದರೆ ನನ್ನಾ ಈ ಧರ್ಮ ದ್ರೋಹದಿಂದ ಕಾಪಾಡು, ಇಲ್ದೇ ಹೋದ್ರೆ ನಾನು ಪ್ರಾಣ ಕಳಕೊಂಡು ಬುಡ್ತೀನಿ ಎಂದು ಹೇಳಿ ಮತ್ತೆ ಎದ್ದರು ನಾಲಗೆ ಮುಂದಕ್ಕೆ ಚಾಚಿ ಅದರ ಬೊಡ್ಡೆ ಹಿಡಿದು ಒಂದು ಸಲ ಮುಷ್ಟಿಯಲ್ಲಿ ಎಳೆದು ಬಿಸಾಡಿಬಿಡಬೇಕೆಂದು ಮಾಡಿಕೊಂಡಿದ್ದರು. ಮತ್ತೆ ಎದ್ದವರು ಸತ್ತ ಎತ್ತಿನ ಬಳಿಗೆ ಹೋಗಿ ಅದರ ಕಿವಿಯಲ್ಲಿ " ಓಂ ನಮಃ ಶಿವಾಯ ಎಂದು ಮೂರು ಸಲ ಅಂದರು ಅದೇನು ಪವಾಡವೋ ಏನೋ ಎತ್ತು ಮೈ ಒದರಿಕೊಂಡು ಬೂದೂರನೆ ಮೇಲಕ್ಕೆ ಎದ್ದು ನಿಂತು ಕೊಂಡಿತು ! ಊರಿಗೆ ಊರೇ ಅಚ್ಚರಿಪಟ್ಟಿತು. ಗುರು ದೇವರನ್ನು ಮನೆಯವರೆಗೆ ಹೆಗಲ ಮೇಲೆ ಕುಳ್ಳಿಸಿಕೊಂಡು ಮೆರವಣಿಗೆ ಮಾಡಿಕೊಂಡು ಹೋದರು"[೧] ಲೇಖಕರು ಜನಪದದ ಜೀವನದ ಆಂತರ್ಯವನ್ನು ಚೆನ್ನಾಗಿ ಅರ್ಥ ಮಾಡಿಮಾಡಿಕೊಂಡಿರುವುದಕ್ಕೆ ಇಂಥ ಕೆಲವು ಸಂದರ್ಭಗಳು ಸಾಕ್ಷಿಯಾಗುತ್ತದೆ.

ಈ ಒಂದು ಸಂದರ್ಭದಿಂದ ಗುರುಮಲ್ಲಯ್ಯನ ಪಾತ್ರಕ್ಕೆ ಸಾಂಪ್ರಾದಾಯಿಕ ಘನತೆ ಹೆಚ್ಚುತ್ತದೆ. ಇಂಥ ಪರಿಸ್ಥಿತಿಗಳು ಜನಪದರಲ್ಲಿ ಆಕಸ್ಮಿಕವೆನಿಸಿದರೂ ಸಹಜ ಅನಿವಾರ್ಯ ಅಂಶಗಳಾಗುವುದನ್ನು ಇಲ್ಲಿ ಗಮನಿಸುತ್ತೇವೆ. ಮೈಸೂರಿನ ಮಂಡಿ ಸಾಹುಕಾರ ಮತ್ತು ಅವನ ಸೂಳೆಯರು ಕೌತುಕದ

೧.ಸೊನ್ನೆಯಿಂದ ಸೊನ್ನೆಗೆ ಪುಟ ೫೨

ಪಾತ್ರಗಳಾಗಿ ನಮ್ಮ ಮನಸ್ಸಿನ ಮೇಲೆ ಆಗಾಗ ಮಿಂಚಿನಂತೆ ಸುಳಿದು ಮಾಯವಾಗುತ್ತಾರೆ. ಆದರೂ ನಮ್ಮ ಮನಸ್ಸಿನ ಒಂದು ಭಾಗದಲ್ಲಿ ಅವರು ಬೀಡು ಬಿಟ್ಟರುವಂತೆನಿಸುತ್ತದೆ. ಅವರ ಬಣ್ಣನೆ ನಮ್ಮನ್ನು ಕಲಕಿದಂತೆ ಕಾಣುತ್ತದೆ. ಅವರ ಬದುಕು ಕಾದಂಬರಿಯ ಪರಿಸರವನ್ನು ಕದಡಿದ ನೀರಿನಂತೆ ಮಾಡುತ್ತದೆ. ಆದರೆ ಇದು ಕಾದಂಬರಿಯಲ್ಲಿ ಬರುವ ಕಾವೇರಿಯಂತೆ ಹರಿಯುವ ನೀರಾದುದರಿಂದ ಆ ಧೂಳು ನೀರಿನ ಕೆಳಗೆ ಉಳಿಯುತ್ತದೆ. ಆದರೆ ಮತ್ತೆಲ್ಲಿ ನೀರನ್ನು ಆ ಧೂಳು ಕಲಕುತ್ತದೆ ಎಂದು ಹೇಳಲು ಸಾಧ್ಯವಿಲ್ಲ.

ಮೈಸೂರಿನಲ್ಲಿ ಮಂಡಿ ಸಾಹುಕಾರವಾಗಿ ಹುಟ್ಟಿಕೊಂಡ ಈ ರೂಪಗಳು ಮತ್ತೆ ಧೂಪದ ಚನ್ನೇಗೌಡರ ಭೋಗಕ್ಕಾಗಿ ಮಂಡ್ಯದಲ್ಲಿ ಆವತರಿಸಿದಂತೆ ಕಾಣುತ್ತದೆ. ಕಾದಂಬರಿಯೆಂಬ ಹರಿಯುವ ನೀರಿಗೆ ಈ ಎಳೆಗಳು ಸೇರಿ ಕರಗಿ ಮತ್ತೆ ಕಾಣಿಸಿಕೊಳ್ಳುತ್ತಾ ಹೋಗುವುದೇ ಕದಂಬರಿಗೆ ನಾವೀನ್ಯತೆಯನ್ನು ಒದಗಿಸಿದಂತಾಗಿದೆ. ಆದುದರಿಂದ ಧೂಪದ ಚನ್ನನಷ್ಟೆ ಶ್ರೀ ಕಂಠಿಸೂಳೆಯರು ಈ ಕಾದಂಬರಿಯ ಪ್ರಮುಖ ಸಾಮಗ್ರಿಗಳಾಗಿದ್ದಾರೆ. ನ್ಯಾಯ-ಅನ್ಯಾಯದ, ಏಳು-ಬೀಳು ಚಕ್ರದ ಅರೆಕಾಲಿನ ರೀತಿಯಲ್ಲಿ ಏರಿಳಿಯುವ ಬದುಕಿನ ನೇತ್ಯಾತ್ಮಕ ಹೋಲಿಕೆ ಇಲ್ಲಿ ದೃಢೀಕರಣವನ್ನು ಪಡೆದಿದೆ. ಈ ಕಾದಂಬರಿಯ ನೈತಿಕ ಸಾಧನೆಯ ಎರಡು ಧ್ರುವಗಳಾಗಿ ಓದುಗನ ಮನಸ್ಸಿನ ಮೇಲೆ ಉಳಿಯುವ ಪಾತ್ರಗಳೆಂದರೆ ದಂಡಪ್ಪ ಮತ್ತು ಸರ್ವಜ್ಞ ಸಂಗಣ್ಣ, ಕುಂಡಪ್ಪ, ಪುರುಜ್ಜೀವಿತ ಧಾರ್ಮಿಕ ತತ್ವಗಳ ಆಕಾಂಕ್ಷೆಯ ಸಂಕೇತವಾಗಿದ್ದರೆ. ಸಂಗಣ್ಣ ಮಾನವನ ಮೂಲಧರ್ಮದ ವೃತ್ತಿಯ ಪ್ರತಿನಿಧಿಯಾಗಿದ್ದಾನೆ. ಸಂಗಣ್ಣನ ದೇವರು ದುಡಿಮೆಯಾಗಿದ್ದರೆ, ಬಂಡಪ್ಪನದು ಮೋಕ್ಷವಾಗಿದೆ. ಸಂಗಣ್ಣ ಕೆಲವೊಮ್ಮೆ ಅನಪೇಕ್ಷಿತವಾಗಿ ಬಂದು ಕಾದಂಬರಿಯಲ್ಲಿ ತಲೆ ತಿನ್ನುತ್ತಿದ್ದಾನೆ. ಎನಿಸಿದರೂ ಆತ ಈ ಕಾದಂಬರಿಯ ಒಂದು ಒಳ ಸೆಲೆಯಾಗಿ ಹರಿದು ಬರುತ್ತಾನೆ. ಇವನಿಗೆ ಸಾವು ಎಂಬುದು ಒಂದು ಲೌಕಿಕ ಸಂಭವ ಅಷ್ಟೆ, ಏಕೆಂದರೆ ಈತ ಆ ಸಮಾಜದ ಬದುಕಿನ ಜೀವನಾಡಿಯಾಗಿ ಸರ್ವಕಾಲಕ್ಕೂ ಇದ್ದಾನೆ. ಕಾದಂಬರಿಯ ಮೊದಲಿನಿಂದ ಕೊನೆಯವರೆಗೆ ಕಾಯಿ ಹಣ್ಣಾದಂತೆ ಜೀನವದ ವಿವಿಧ ಅನುಭವವಾಗುತ್ತಾ ಅದನ್ನು ಕಾಣುತ್ತಾ ಹೇಳುತ್ತಾ ಹೋಗುತ್ತಾನೆ. ಯುಗ ಬದಲಾವಣೆಯನ್ನು ಕುರುಕ್ಷೇತ್ರದ ಅಂತ್ಯದೊಂದಿಗೆ ಕಾಣುವ ಪೌರಾಣಿಕ.

ಈತ ಯುಗ ಧರ್ಮವೊಂದರ ಭವಿಷ್ಯದ ಪ್ರತೀಕವೂ ಆಗಬಲ್ಲ, ಕಲ್ಲೇಗೌಡ ಗುರುಸಿದ್ದಯ್ಯ ಪುಟ್ಟೇಗೌಡ ಮತ್ತು ಧೂಪದ ಚನ್ನೇಗೌಡನ ಬಾಳಿನ ಬದಲಾವಣೆಯ ಬೆಳವಣಿಗೆಯನ್ನು ದ್ವಾಪರ ಮತ್ತು ಕಲಿಯುಗದ ಬದುಕಿನ ಅಂತರಂಗದಲ್ಲಿ ಕಾಣುತ್ತಾನೆ. ಆದುದರಿಂದ ಎರಡು ತಲೆಮಾರುಗಳ ಕಾಲ ಮಹಿಮೆಯ ವಿಮರ್ಶಕನೂ, ಅದೆ ಸಂದರ್ಭದಲ್ಲಿ ಒಂದು ಕಾಲಘಟ್ಟದ ಆದರ್ಶದ ಪ್ರತೀಕವೂ ಆಗಿದ್ದಾನೆ. ಒಂದು ಹುಟ್ಟಿನೊಂದಿಗೆ ಬಹಳ ಕಾಲಗಳ ಯಜಮಾನನಾಗಿರುವ ಕರೇಗಲ್ಲು ಅಥವಾ ಊರ ಮುಂದಿನ ಅರಳಿಕಟ್ಟೆಯಂತೆ ಸಂಗಣ್ಣ ಮೈಲಾರದ ಮೂಲ ಪುರುಷನೂ, ಊರಿನ ಏಳು ಬೀಳುಗಳ ವೀಕ್ಷಕನೂ ಒಂದು ವಿಧದಲ್ಲಿ ಅದರ ಪರೀಕ್ಷಕನೂ ಪರಿಹಾರ ಸೂಚಕನೂ ಆಗಿದ್ದಾನೆ. ಈ

ಪರಿಸ್ಥಿತಿಯನ್ನು ಅವನಿರುವ ರೀತಿ ಮತ್ತು ಆತ ಕುಳಿತು ಕೊಳ್ಳುವ ಸ್ಥಳ ದಿನನಿತ್ಯ ವೀಕ್ಷಿಸುವ ಸಂಧಿಸುವ ಜನಗಳ ಬಗ್ಗೆ ಹೇಳುವ ಮೂಲಕ ಕಾದಂಬರಿಕಾರರು ಸ್ಪಷ್ಟ ಪಡಿಸಿದ್ದಾರೆ. ಇಲ್ಲಿ ಹಿಂಗೆ ಸಂಗಣ್ಣ ಮೈಲಾರದ ಪ್ರತಿಯೊಬ್ಬರಿಗೂ ಏನಾದರೂ ಒಂದು ಹೇಳುವ ರಂಗದ ಮಧ್ಯೆ ಇದ್ದ ಕಲ್ಲು ಮಂಚದ ಮೇಲೆ ಅವನ ಪೀಠ ಹೆಚ್ಚು ಕಮ್ಮಿ ಸರ್ವಜ್ಞನಂತೆ ಬರಿಮೈ. ಊರಿನ ಯಾರು ಹೋದರೂ ಬಂದರೂ ರಂಗ ಹಾದೇ ಹೋಗಬೇಕು. ಅವರೆಲ್ಲರಿಗೂ ಹಿರಿಯನಾಗಿ ಅವರೆಲ್ಲರ ಬಗ್ಗೆ ಏನಾದರೊಂದು ಹೇಳಿ ಅದನ್ನೆಲ್ಲಾ ಊರಿಗೆ ಪ್ರಚಾರ ಮಾಡಿ ಮೈಲಾರದ ಸರ್ವಜ್ಞನಾಗಿದ್ದ ಸಂಗಣ್ಣ ವಯಸ್ಸು ಮಾಗಿದಂತೆ ಆತ ಎಷ್ಟು ಉತ್ತಮ ಅಥವಾ ಸಹಜ ಮನುಷ್ಯನಾಗುತ್ತಾನೆ ಎನಿಸುತ್ತದೆ. ಮನುಷ್ಯನ ಹುಟ್ಟು ಮನುಷ್ಯನ ಸಹಜವಾಗಿ ಬದುಕುವುದಕ್ಕೆ ಯಾವುದೋ ಒಂದು ಅವ್ಯಕ್ತ ಶಕ್ತಿಗೆ ಬಲಿಕೊಟ್ಟುಕೊಳ್ಳಲು ಅಲ್ಲ ಎನ್ನುವುದನ್ನು ಆತ ಸ್ಪಷ್ಟ ಪಡಿಸಿದ್ದಾನೆ.

"ಕೊಟ್ಟ ದೇವರು ಕೊಂಡು ಹೋದರೆ

ಕುಟ್ಟಿಕೊಂಡು ಅಳುವುದೇತಕೊ!"

ಈ ಹಾಡನ್ನು ಕೇಳಿದ ಸರ್ವಜ್ಞ ಸಂಗಣ್ಣನಿಗೆ ಅವನ ಮೈ ಮೇಲೆ ಕಂಬಳಿ ಹಾಕಿದಂತಾಯಿತು. ಲೇ ಹುಚ್ಚು ಮುಚ್ಚುಬಾಯಿ, ಚಿಂತೆ ಮಾಡ್ದೇ ಇದ್ರೆ ನೀ ನಡೆಸಿಯೇನೋ ಸಂಸಾರವಾ? ಮುಕ್ತಿ, ಮುಕ್ತಿ! ಅಂತ ಮಾತು ಮುಕ್ಕಬೇಡ ಕಾವಿ ಹಾಕಿ ಸುಲಭವಾಗಿ ಶಾವಿಗೆ ಉಣ್ಣುವ ಬುದ್ದಿಯ ಈ ಹಳ್ಳಿಯೋರಿಗೆ ಕಲಿಸಬೇಡ. ಯಾರಿಗೆ ಮುಕ್ತಿಗೋತ್ತೇನೋ? " ಹೊಲ ಉಳುವಗೆ ಮುಕ್ತಿ ಕುಳವ ಬಡಿವಗೆ ಮುಕ್ತಿ ಛಲದಲ್ಲಿ ನಾಡಕಾವಣೆಗೆ ಮುಕ್ತಿ ಮತ್ತೆ ಮನದಾಳದಲ್ಲಿ ಹರಿಯ ನೆನೆವಗೆ ಮುಕ್ತಿ !" ಈ ಮಾತುಗಳು ಮನುಷ್ಯನ ಬದುಕಿನ ಮೂಲಭೂತ ಅರ್ಥಗಳಾಗುತ್ತದೆ. ನಿಜವಾದ ಬದುಕಿನ ಅರ್ಥ ಹಾಳುಗುತ್ತದೆ ಎನ್ನುವುದನ್ನು ಕಾಣುವುದರೊಡನೆ ಅವನ ಸಾವು ಯೋಜಿತಗೊಂಡಿರುವುದು ಹೆಚ್ಚು ಅರ್ಥಪೂರ್ಣವಾಗಿದೆ. ಈ ಪಾತ್ರ ಸೃಷ್ಟಿಯಲ್ಲಿ ಕಾದಂಬರಿಕಾರರು ತಮ್ಮ ಸೊಪಜ್ಞತೆಯನ್ನು ಮೆರಿದಿದ್ದಾರೆ ಬದುಕುವುದರ ಅನಿವಾರ್ಯತೆಯನ್ನು ಈ ಪಾತ್ರದ ಮೂಲಕ ಸ್ಪಷ್ಟಪಡಿಸಿದ್ದಾರೆ.

ಕುಂಡಪ್ಪನ ಅವ್ವ ಚನ್ನಯ್ಯನ ಧರ್ಮಕರ್ಮ ಸಂಯೋಗದ ಫಲ, ಈ ಒಂದು ಗೊಂದಲವನ್ನು ಅರಿತೆ ಬದುಕುತ್ತಿರುವುದರಿಂದ ಅವನ ಬದುಕು ಇಹಪರಗಳ ಮಧ್ಯೆ ತೂಗುಯ್ಯಾಲೆಯಾಡುತ್ತದೆ. "ಇಲ್ಲಿ ಬದುಕಿದ್ದರೂ ಅಲ್ಲಿದ್ದೇನನ್ನುವ" ಭ್ರಮೆ ಅವನದು. ಆ ಭ್ರಮೆಯನ್ನು ಸತ್ಯ ಮಾಡಿಕೊಳ್ಳುವ ಕಾರಣಕ್ಕಾಗಿ ಏನೆಲ್ಲ ಪ್ರಯತ್ನವನ್ನೂ ಆತ ನಡೆಸಲು ಸಿದ್ದನಿದ್ದಾನೆ. ಸಂಗಣ್ಣನ ರೀತಿಯಲ್ಲಿ ಆತನೊಬ್ಬ ಕರ್ಮಯೋಗಿ ಸಹಜವಾಗಿ ಅದರಿಂದಲೇ ಅವನ ಮುಕ್ತಿ ಇದೆ. "ಗುರು ಮಲ್ಲಯ್ಯ ಒಬ್ಬ ಕಾಯಕವಾದಿಯಾಗಿದ್ದರೂ ಅದನ್ನು ತಿಳಿಯದೆ ಅವನನ್ನು ಬರಿಯ ಗುರುವಾಗಿ ಮಾತ್ರ ಕಾಣುವ ಹೆಡ್ಡತನವನ್ನು ಪ್ರದರ್ಶಿಸಿದ್ದಾನೆ. ಈ ಒಂದು ಹೆಡ್ಡತನವೇ ಕೊನೆಯಲ್ಲಿ ಆತ ಜನಮನದ ಮೇಲೆ ಒಬ್ಬ ಭಾರಿ ಆದರ್ಶಯೋಗಿಯಂತೆ ಭಾವಿಸುವ ಸಂದರ್ಭವನ್ನು ಕಲಿಸಿದೆ. ಹಿಂದು ಮುಂದಿನ ಘಟನೆಗಳಿಗೆ ಕಾರಣವಾಗುವ ಈತ

ಧೂಮಕೇತುವೊಂದರಂತೆ ಸಮಾಜ ಮತ್ತು ನಂಬಿಕೆಯ ನಡುವೆ ಒಂದು ಆವರಣವನ್ನು ಸೃಷ್ಟಿಸಿ ಮರೆಯಾಗುತ್ತಾನೆ. ಈ ಪರಿಣಾಮ ಈ ಕಾದಂಬರಿಯ ಸಮಾಜಕ್ಕೆ ದೃಗೋಚರವಲ್ಲ ಓದುಗನಿಗೆ ಮಾತ್ರ ಮನನವಾಗುತ್ತದೆ. ಎಂಬುದಾಗಿ ಹಿ.ಶಿ. ರಾಮಚಂದ್ರೇಗೌಡರು ಅಭಿಪ್ರಾಯ ಪಡುತ್ತಾರೆ ಮಾನ್ಯವಾದ ಮಾತುಗಳಿವು.

## ಅಧ್ಯಾಯ – ೬

### ಜಾನಪದೀಯ ಅಂಶಗಳು;–

ಮನುಷ್ಯ ಎಲ್ಲೆಲ್ಲಿ ಇರುತ್ತಾನೆಯೋ ಅಲ್ಲೆಲ್ಲ ಸಂಸ್ಕೃತಿ ಇರುತ್ತದೆ. 'ಹರ್ಸಕೂವಿಟ್ಸ' ಹೇಳುವಂತೆ "ಜನರ ಜೀವನ ವಿಧಾನವೇ ಸಂಸ್ಕೃತಿ" ಈ ಜನರು ಯಾರಾದರೂ ಆಗಿರಬಹುದು, ಎಲ್ಲಾದರೂ ವಾಸಿಸಬಹುದು. ಸಂಸ್ಕೃತಿಯ ವೈಯಕ್ತಿಕ ವೈಶಿಷ್ಟ್ಯಗಳನ್ನು ಬಿಟ್ಟರೂ ಸರ್ವರಿಗೂ ಒಪ್ಪಿತವಾಗಿರುವ ಅನೇಕ ಅಂಶಗಳನ್ನು ರೂಢಿಸಿಕೊಂಡು ಬಾಳುತ್ತಿರುತ್ತಾರೆ. ಈ ಮೇಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಎಚ್.ಎಲ್.ನಾಗೇಗೌಡರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಜನರ ಜೀವನ ಕ್ರಮವನ್ನು ಅಧ್ಯಯನ ಮಾಡುವುದರ ಜೊತೆಗೆ ಅವರ ಸಾಂಸ್ಕೃತಿಕ ಜೀವನದ ಅಧ್ಯಯನವನ್ನು ಮಾಡಬಹುದು. ಈ ಕಾದಂಬರಿಗಳಲ್ಲಿನ ಹಲವಾರು ಜಾತಿ ಪಂಗಡಗಳಿಗೆ ಸೇರಿದ ಜನರ ಉದ್ಯೋಗ, ವೃತ್ತಿ. ಪ್ರವೃತ್ತಿ, ಸಂಪ್ರದಾಯ, ನಂಬಿಕೆ, ಬಲಿ, ಹರಕೆ ಇಂಥ ಹಲವಾರು ವಿಷಯಗಳನ್ನು ಕುರಿತು ಹಾಗೂ ಹಬ್ಬಗಳ ಆಚರಣೆ, ದೇವರುಗಳ ಆರಾಧನೆ, ಜಾತ್ರೆ ಮೊದಲಾದವುಗಳ ವಿವರಗಳು ಕಳೆದುಹೋದ ಸಂಸ್ಕೃತಿಯ ಪುನರ್ ಸೃಷ್ಠಿಗೆ ಸಹಾಯಕವಾಗುತ್ತವೆ ಎನ್ನಬಹುದು.

**೧ ಯಂತ್ರ–ಮಂತ್ರ;–** ನಾಗೇಗೌಡರ 'ದೊಡ್ಡಮನೆ' ಕಾದಂಬರಿಯಲ್ಲಿ ಯಂತ್ರ–ಮಂತ್ರದಂಥಹ ಗ್ರಾಮೀಣ ಸಂಸ್ಕೃತಿಯ ಚಿತ್ರಗಳ ಪ್ರಸ್ತಾಪ ಅಲ್ಲಲ್ಲಿ ಬರುತ್ತದೆ. ಇವು ಜನಸಾಮಾನ್ಯರ ಮೇಲೆ ವಿಶೇಷ ಪ್ರಭಾವ ಬೀರುವುದನ್ನು ಗಮನಿಸಬಹುದು. ಕೆಂಗಣ್ಣ ಮತ್ತು ಹುಳ್ಳಿಚಿಕ್ಕ ರಾತ್ರಿ ಹೊತ್ತು ಊರಿಗೆ ಬರುತ್ತಿರುವಾಗ ಅತ್ತಿಮರದ ಮೇಲಿಂದ ಏನೋ ದೊಪ್ಪನೆ ಬಿದ್ದಂತಾಗುತ್ತದೆ ಸ್ವಲ್ಪ ಹೊತ್ತಿಗೆ ಕುರಿ ಅರಿಚಿದಂತಾಗಿ ನೋಡಲು ಅದನ್ನು ಓಡಾಡಿಸಿ ಹಿಡಿದು ಹುಳ್ಳಿಚಿಕ್ಕ ಹೆಗಲಮೇಲೆ ಹಾಕಿಕೊಂಡು ಬರುತ್ತಿರುವಾಗ ಸ್ವಲ್ಪದೂರ ಬರುತ್ತಿದ್ದಂತೆ ಅದು ಹೊರಲಾಗದಷ್ಟು ಭಾರವಾಗಿ ಕೆಳಗೆ ಹಾಕಲು ಮಾಯವಾಯಿತು. ಎಲ್ಲೂ ಕಾಣದೆ ಹೋದಾಗ ಅವರಿಬ್ಬರು ಅದು ದೆವ್ವವೇ ಇರಬೇಕೆಂದು ನಿರ್ಧರಿಸಿ ಓಡಿ ಊರು ಸೇರುತ್ತಾರೆ. ದೊಡ್ಡಮನೆ ಬಾಗಿಲಿಗೆ ಬಂದು ಕೆಂಗಣ್ಣ ಕೂಡಿಕೊಂಡಾಗ ಜನ ಸೇರುತ್ತಾರೆ ಅವನು ಹೆದರಿರವುದರಿಂದ ಭೀತಿ ನಿವಾರಣೆಗೆ ಚೀಟು ಕಟ್ಟಿಸುತ್ತಾರೆ. ಆಚಾರ್ರು ಒಂದು ಸ್ವಲ್ಪಜಾಗವನ್ನು ಸಗಣಿಯಿಂದ ಸಾರಿಸಿ ರಂಗೋಲಿಯಿಟ್ಟು, ದೀಪಹಚ್ಚಿ, ದೀಪಾಲೆಕಂಬದ ಮೇಲೆ ಇಟ್ಟು, ತಮ್ಮ ಕಟ್ಟಿನಿಂದ ವಾಲೆಗರಿಗಳನ್ನು ತೆಗೆದು ಅದರಲ್ಲಿ ಎರಡು ಬೆರಳಿನಷ್ಟು ನಿಧಾನವಾಗಿ ಹರಿದರು. ಅದರ ಮೇಲೆ ಅಡ್ಡಗೀಟು, ಉದ್ದಗೀಟು ಎಳೆದು ಹನ್ನೆರಡು ಮನೆಗಳ ಒಳಗೂ ಏನನ್ನೊ

ಬರೆದರು. ಸಾಂಬ್ರಾಣಿ ಹೊಗೆ ಕೊಟ್ಟು ಮಂತ್ರ ಹೇಳುತ್ತಾ ಕೆಂಗಣ್ಣನನ್ನು ಎದುರಿಗೆ ಕೂರಿಸಿಕೊಂಡು ಮೂರು ಸಲ ನೀರನ್ನು ಅವನ ಮುಖಕ್ಕೆ ಬಡಿದಾಗ ಅವನಿಗೆ ಜ್ಞಾನ ಬಂದಿತು.

ಗ್ರಾಮೀಣ ಜನರಲ್ಲಿ ದೆವ್ವಭೂತಗಳ ಬಗ್ಗೆ ಅತೀವವಾದ ನಂಬಿಕೆ. ಕುರಿಮಂದೆಯಲ್ಲಿ ಮಲಗಲು ಹೋದ ಕೆಂಗಣ್ಣ ಮಲಗಿದ್ದಾಗ ಮುತ್ತುಗದ ಮರದ ಮೇಲಿಂದ ದೆವ್ವಬಂದು ತನ್ನ ಮೇಲೆ ಬಿದ್ದು ಅದುಮಿತೆಂದು ಭಯದಿಂದ ಕಿರುಚಿಕೊಳ್ಳುತ್ತಾನೆ. ಅವನನ್ನು ಎತ್ತುಕೊಂಡು ಬಂದು ಕಪ್ಪು ಬಳೆ ಚೂರನ್ನು ದೀಪದ ಬೆಳಕಿನಲ್ಲುರಿಯಲ್ಲಿ ಕಾಯಿಸಿ ಚಿಟಿಕೆ ಹಾಕುವುದನ್ನು 'ಬಳೆಚಿಟಕಿ' ಎಂದು ಕರೆಯುತ್ತಾರೆ. ಚೀಟು ಕಟ್ಟಿಸುತ್ತಾರೆ, ಯಂತ್ರ ಹಾಕಿಸಿ, ಪೂಜೆ ಹಾಕಿಸಿ, ಕೊರಮಿತಿ ನರಸಮ್ಮನನ್ನು ಕರೆಸಿ ದಾಟು ತೆಗೆಸುತ್ತಾರೆ.

ಹಳ್ಳಿಗಳಲ್ಲಿ ಹಬ್ಬಗಳ ಸಮಯದಲ್ಲಿ ದೇವರು ಮೈಮೇಲೆ ಬರುವುದು, ಮೈಮೇಲೆ ಬಂದ ವ್ಯಕ್ತಿ ದೆವ್ವ ಹಿಡಿದವರಿಗೆ ದೆವ್ವ ಬಿಡಿಸುವ ಕೆಲಸವನ್ನು ಮಾಡುವುದು ಸಾಮಾನ್ಯವಾಗಿ ಕಂಡುಬರುತ್ತದೆ. ದೆವ್ವ ಭೂತಗಳು ಹೆಚ್ಚಾಗಿ ಹೆಂಗಸರ ಮೈಮೇಲೆ ಬರುವುದು. ದೊಡ್ಡಮನೆ ಕಾದಂಬರಿಯಲ್ಲಿ ದೊಡ್ಡ ಹಬ್ಬದ ಸಮಯದಲ್ಲಿ ಸ್ವಾಮಿ ಕುಣಿಯುತ್ತಿರುವಾಗ ಅಲ್ಲೇ ಇದ್ದ ಕಿಡ್ಲಿ ಬೋರಮ್ಮನ ಸೊಸೆಗೆ ಮೈಮೇಲೆ ಬಂದುಬಿಡುತ್ತದೆ. ಸ್ವಾಮನನ್ನು ಹಾಕಿದವನು ಅವಳ ತಲೆಗೂದಲನ್ನು ಹಿಡಿದುಕೊಂಡು ಗಿರಗಿರನೆ ತಿರುಗಿಸಿ, ನಾಗಬೆತ್ತದಿಂದ ನಾಲ್ಕು ಬಾರಿಸುತ್ತಾನೆ. ಪೂಜಾರಿ ದೇವರತೀರ್ಥವನ್ನು ಆಕೆಯ ಮೇಲೆ ಎಸೆದಾಗ ಎದ್ದು ನಾಚಿಕೆಯಿಂದ ಹೆಂಗಸರ ಮಧ್ಯೆ ಸೇರಿಕೊಳ್ಳುತ್ತಾಳೆ. ದೆವ್ವ ಗಾಳಿಗಳ ವಿಚಾರ ಚಿಕ್ಕಮಕ್ಕಳ ಮನಸ್ಸಿನ ಮೇಲೂ ಪರಿಣಾಮ ಬೀರುತ್ತವೆ ಎಂಬುದಕ್ಕೆ 'ನಾಗು' ದೂರದ ಊರಿನ ಶಾಲೆಗೆ ಹೋಗುವಾಗ, ಬರುವಾಗ ದೊಡ್ಡಮರಗಳನ್ನು ಕಂಡು ಹೆದರುತ್ತಾನೆ. ಅತ್ತಿಮರದ ಮೇಲೆ, ಇಪ್ಪೆಮರದ ಮೇಲೆ ದೆವ್ವಗಳು ಇರುತ್ತಾವೆ. ಯಾರೂ ಇಲ್ಲದೆ ಇರುವಾಗ ಒಬ್ಬರೇ ಹೋಗುತ್ತಿದ್ದರೆ ಅವು ಹಿಡಿದುಕೊಳ್ಳುತ್ತವೆ ಎಂಬುದು ಅವನ ಮನಸ್ಸಿನ ಮೇಲೆ ನಾಟಿಕೊಂಡಿತ್ತು. ದೆವ್ವ-ಭೂತಗಳು ಹಳ್ಳಿಯ ಜನರ ಬದುಕಿನಲ್ಲಿ ಸೇರಿಹೋಗಿದ್ದು ಅವುಗಳಿಂದ ಪಾರಾಗಲು ಯಾತ್ರ-ಮಂತ್ರ, ಪ್ರಸಾದ-ದಾರ, ಚೀಟು ಹಾಕಿಸುವುದನ್ನು ಮಾಡುವುದರ ಮೂಲಕ ಪರಿಹಾರಗಳನ್ನು ಕಂಡುಕೊಂಡಿದ್ದಾರೆ ಎಂದು ಹೇಳಬಹುದು.

**೨.ಹರಕೆ ಮತ್ತು ಬಲಿ:-** ಬಯಲು ಸೀಮೆಯ ಜನ ದೇವರು, ಭೂತ, ಪ್ರೇತಗಳಿಗೆ ಹೆದರಿ ಅವುಗಳಿಗ ಬಲಿ ಹರಕೆಗಳನ್ನು ಅರ್ಪಿಸುವುದು ಕಂಡುಬರುತ್ತದೆ. ಗ್ರಾಮದೇವತೆಗಳ ಹಬ್ಬಗಳಲ್ಲಿ ಬಲಿಕೊಡುವುದು ಒಂದು ಸಂಪ್ರದಾಯ. ಹರಕೆ ಮಾಡಿಕೊಂಡವರು ಬಾಯಿಬೀಗ ಹಾಕಿಸಿಕೊಳ್ಳುತ್ತಾರೆ, ಕೊಂಡಹಾಯುತ್ತಾರೆ, ಮರಿಹಬ್ಬದ ದಿನ ಕುರಿಗಳನ್ನೆಲ್ಲಾ ತೊಳೆದು ದೇವರಗುಡಿಯ ಸುತ್ತ ಪ್ರದಕ್ಷಿಣೆ ಬರುತ್ತಾರೆ. ಅನಂತರ ಹರಕೆ ಮಾಡಿಕೊಂಡ ಕುರಿಗಳನ್ನು ದೇವರಿಗೆ ಬಲಿಕೊಡುತ್ತಾರೆ. ಇದರಲ್ಲಿ ಇನ್ನೊಂದು ಪದ್ಧತಿ 'ಗಾವು ಸಿಗಿಯುವುದು' ಇದು ಭಯಂಕರವಾದ ದೃಶ್ಯ ಹರಕೆಗೆ ಬಿಟ್ಟ ಕುರಿಗಳ

ಗಂಟಲಿಗೆ ಬಾಯಿಹಾಕಿ ಗೋಮಾಳೆಕಿತ್ತು ಬರುವಂತೆ ರಕ್ತ ಹೀರಿ ಮಾಂಸದ ತುಂಡಿರುವ ರಕ್ತದ ಬಾಯನ್ನು 'ಹಾ' ಎಂದು ತೋರಿಸುತ್ತಾರೆ.

ಕೋಣನ ಬಲಿ ಎಲ್ಲ ಕಡೆಗಳಲ್ಲೂ ಇರುವ ಒಂದು ಪದ್ಧತಿ. ಕೋಣನ ಬಲಿಕೊಡುತ್ತಿದ್ದವರು ಹೊಲೆಯರು. ಗೆಂಡೇಕಾಳ ಒಂದೇ ಏಟಿಗೆ ಕೋಣನ ತಲೆಯನ್ನು ಕತ್ತರಿಸುವುದರಲ್ಲಿ ಪ್ರವೀಣನಾಗಿದ್ದನೆಂದು 'ದೊಡ್ಡಮನೆ' ಕಾದಂಬರಿಯಲ್ಲಿ ವರ್ಣಿತವಾಗಿದೆ. ಈ ರೀತಿ ಪೂಜೆ ನಡೆದುಕೊಂಡು ಬರದಿದ್ದರೆ ದೇವರುಗಳು ಸಿಟ್ಟಾಗಿ, ಊರಿಗೆ ಪ್ಲೇಗು ಮೊದಲಾದ ಕಾಯಿಲೆಗಳು ಬರುತ್ತದೆ ಎಂಬ ನಂಬಿಕೆಯ ಹಿನ್ನಲೆಯಿತ್ತು.

ಗ್ರಾಮದೇವತೆಯ ಹಬ್ಬಗಳಲ್ಲಿ ಕೋಣ, ಕುರಿಗಳ ಬಲಿಯಾಗುವುದು ಸಾಧರಣ. ದೊಡ್ಡಮನೆ ಕಾದಂಬರಿಯಲ್ಲಿ ಇದಕ್ಕೆ ಆಧಾರ ಸಿಗುತ್ತದೆ. ಹೊಲೆಯರ ಹಟ್ಟಿಯಲ್ಲಿ ಮಾಂಸಕ್ಕೆ ಬರವಿರುವುದಿಲ್ಲ. ಗೆಂಡೇಕಾಳ, ದುಂಡಿಯರು ಒಣಗಿದ ಮಾಂಸವನ್ನು ಅಂದರೆ ಉಪ್ಪುಖಾರವನ್ನು ನೆಂಚಿಕೊಂಡು ಹೆಂಡ ಕುಡಿಯುವ ವರ್ಣನೆ ಬರುತ್ತದೆ. ಊರಿನ ದೊಡ್ಡ ಹಬ್ಬಗಳಲ್ಲಿ ನೆಂಟರಿಷ್ಟರನ್ನು ಕರೆಯುತ್ತಾರೆ ದೇವರಿಗೆ ಬಲಿಯಾಗುವ ಪ್ರಾಣಿಗಳ ಜೊತೆ ಮನೆಗಳಲ್ಲಿ ಊಟಕ್ಕೆ ಹಲವು ಪ್ರಾಣಿಗಳು ಬಲಿಯಾಗುತ್ತವೆ. ಕಾದಂಬರಿಯಲ್ಲಿ ದೊಡ್ಡ ಹಬ್ಬದ ದಿನ ದೊಡ್ಡಮನೆ ಲಿಂಗೇಗೌಡರು ಮನೆಗೆ ಬಂದ ನೆಂಟರಿಗೆಲ್ಲ ಊಟಹಾಕುವ ವರ್ಣನೆಯಿದೆ. ಆರು ಮರಿಗಳನ್ನು ಕಡಿದು ಹಬ್ಬದಡುಗೆ ಮಾಡಿರುತ್ತಾರೆ. ಗೌಡರೇ ಊಟದ ಮೇಲ್ವಿಚಾರಣೆಗೆ ನಿಂತಿರುತ್ತಾರೆ.

ದನಕರುಗಳಿಗೆ ಕಾಯಿಲೆಯಾದಾಗ ಶಾಸ್ತ್ರ ಕೇಳುವುದು, ಯಂತ್ರ–ಮಂತ್ರ ಮಾಡುವುದು, ಹರಕೆ ಬಲಿಕೊಡುವುದು ಸಹ ರೂಢಿಯಲ್ಲಿದೆ. ಕೆಂಗಣ್ಣ ತನ್ನ ಪ್ರೀತಿಯ ಹೋರಿ ಸತ್ತಾಗ ಶಾಸ್ತ್ರ ಕೇಳಲು ಹೋಗುತ್ತಾನೆ. ಜನರಿಗೆ, ದನಗಳಿಗೆ ಕಾಯಿಲೆ ಬಂದರೆ ಔಷಧೋಪಚಾರಕ್ಕಿಂತ ಹರಕೆ, ಬಲಿ, ಯಂತ್ರ, ಮಂತ್ರಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಅಂದಿನ ಸಮಾಜದಲ್ಲಿ ಕಾಣಬಹುದಾಗಿದೆ. ಅಲ್ಲದೆ ಲಿಂಗೇಗೌಡರು ತಮ್ಮ ನಾಲ್ಕನೇ ಹೆಂಡತಿಗೆ ಹೆರಿಗೆಯಾಗಿ ಮಕ್ಕಳು ಉಳಿಯದೆ ಸಾಯತೊಡಗಿದಾಗ ಧರ್ಮಸ್ಥಳದ ಮಂಜುನಾಥನಿಗೆ ಹರಕೆ ಹೊತ್ತು ಗಂಡ–ಹೆಂಡತಿ ಅಲ್ಲಿಗೆ ಹೋಗುತ್ತಾರೆ. ಚುಂಚನಗಿರಿ ಬೈರವನಿಗೆ ಹೋಗಿ ಪೂಜೆ ಸಲ್ಲಿಸುತ್ತಾರೆ.

'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿಯಲ್ಲಿ ದೇವಸ್ಥಾನ ಊರ್ಜಿತಕ್ಕೆ ಮನೇಲಿರೋ 'ಹರಕೆ ಹಾಡ್ಯ'[೧] ಮುಡುಪುತರಲು ಸಾರಿದ್ದನ್ನು ಗಮನಿಸಬಹುದು. ದೇವರ ಹರಕೆ ಸಲ್ಲಿಸುವಾಗ ಚಿನ್ನ–ಬೆಳ್ಳಿಯ ಪಾತ್ರ ಹಿರಿದಾದುದು. ಹರಕೆಗಳನ್ನು ಕಟ್ಟುವುದರಲ್ಲಿ ಹೆಂಗಸರ ಪಾತ್ರ ಅಧಿಕ. ಕಾಯಿಲೆ

---

೧. 'ಹರಕೆ ಹಾಡ್ಯ' ಮನೆಗಿನೆ ಎಂಬಂತೆ ಒಂದು ಜೋಡಿಪದ.

ಕಸಾಲೆಬಿದ್ದಾಗ ಹೆತ್ತಾಗ-ಸತ್ತಾಗ, ಹೆಂಗಸರು ಕಟ್ಟುವ 'ಹೊನ್ನೆಸಳು'[೧] ಮುಖ್ಯವಾದುದು.

ಮಕ್ಕಳಿಲ್ಲದವರು ಗಂಡುಮಕ್ಕಳಾದ್ರೆ ತುಪ್ಪದ ಕಜ್ಜಾಯದ ನೈವೇದ್ಯ ಮಾಡಿಸ್ತೀನಿ ಎಂತಲೂ ಮೊದಲ ಮಗನಿಗೆ ನಿನ್ನ ಹೆಸರಿಡ್ತಿನಿ ಎಂತಲೂ ಹರಕೆಕಟ್ಟುವ ಪರಿಯೂ ಇದೆ.[೨] ಇಷ್ಟೆ ಅಲ್ಲದೆ ಹಿಂದಿನ ಪಾಪ ನಿವಾರಣೆಗೋಸ್ಕರ ತಪ್ಪು ಕಾಣಿಕೆ ಸಲ್ಲಿಸುವ ರೀತಿಯಲ್ಲಿ ದೇವರ ಸೇವೆ ಮಾಡುವುದನ್ನು ಕಾಣಬಹುದು. ಕುಂಡಪ್ಪ ತನ್ನ ಅಣ್ಣನ ಮಗ ಚನ್ನನಿಗೆ 'ಮೈಲಾರ ಲಿಂಗನ ಗುಡಿ ಕಟ್ಟಿಸಿ ಹೊಸ ಲಿಂಗ ತಂದಿರಿಸಿ ಅಭೀಷೇಕ ಮಾಡ್ಸು' ಎಂದು ಹೇಳಿದುದರಲ್ಲಿ ಹಿಂದಿನ ಪಾಪ ಪರಿಹಾರ ಮಾಡಿಕೊಳ್ಳುವ ಅಭಿಲಾಷೆಯನ್ನು ಕಾಣಬಹುದು.

**೩) ಮೈಲಾರದ ಐತಿಹ್ಯ:-** 'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿಯಲ್ಲಿ ಮೈಲಾರ ಗ್ರಾಮಕಥೆಯ ಕೇಂದ್ರವಾಗಿದೆ. ನಾಗೇಗೌಡರ 'ನನ್ನೂರು' ಕೃತಿಯಲ್ಲಿ ಬರುವ ನನ್ನೂರು ಎಂಬುದು ಸಾಂಕೇತಿಕವಾದಂತೆ. ಈ ಕಾದಂಬರಿಯಲ್ಲಿ 'ಮೈಲಾರ' ಸಾಂಕೇತಿಕವಾಗಿದೆ.

ಮೈಲಾರ ಗ್ರಾಮದ ಕಾಲವನ್ನು ಗುರುತಿಸುವ ಕಾದಂಬರಿಕಾರರು, ಮೈಲಾರಕ್ಕೆ ಹೊಲೆಯರೇ ಮೂಲನಿವಾಸಿಗಳು ಎನ್ನುತ್ತಾರೆ. 'ಅವರೇ ತರಗು ಗುಡಿಸಿ ಮನೆಕಟ್ಟಿ 'ಕರುಗಲ್ಲು' ನೆಟ್ಟವರು, ಅವರೇ ಮೊದಲಿಗೆ ಹುತ್ತದ ಮೇಲಿರುವ ಕಾಳಮ್ಮನ ಗುಡಿಕಟ್ಟಿದವರು. (ಸೊನ್ನೆಯಿಂದ ಸೊನ್ನೆಗೆ,ಪು.೬೫) . . ತೋಟಿತನ ಅಥವಾ ಕುಲವಾಡಿಕೆ ಕೆಲಸ ಆ ಕಾಲಕ್ಕೆ ನೀಚ ಕೆಲಸ ಎಂದು ಊರಿನ ಒಕ್ಕಲಿಗರಾಗಲೀ ಹೊಲೆಯರಾಗಲೀ ಭಾವಿಸಿರಲಿಲ್ಲ. ಅದಕ್ಕೆ ಬದಲು ಅದೊಂದು ತಳಮನೆಯ ಅರಮನೆ ಚಾಕರಿ ಎಂದು ಎಲ್ಲರೂ ಭಾವಿಸಿದ್ದರು. ಇಂಥ ಚಾಕರಿಯನ್ನು ಬಹುನಿಷ್ಠೆ ಹಾಗೂ ದಕ್ಷತೆಗಳಿಂದ ನಿರ್ವಹಿಸುತ್ತಿದ್ದ ಹುಚ್ಚೀರನಿಗೆ ಪಟೇಲ ಮೊದಲುಗೊಂಡು ಎಲ್ಲರೂ ಹೆದರುತ್ತಿದ್ದರು. "ಮೈಲಾರದಲ್ಲೇ ಆಗಲಿ ಸುತ್ತ ಮುತ್ತ ಹಳ್ಳಿಗಳಲ್ಲೇ ಆಗಲಿ ದರ್ಜಿಗಳಾಗಲಿ ಹೊಲೆಯುವ ಯಂತ್ರಗಳಾಗಲಿ ಇರಲಿಲ್ಲ ಎಲ್ಲೋ ಅಪ್ಪಿ ತಪ್ಪಿ ಹೊಲೆದುಕೊಳ್ಳಲೇಬೇಕಾದರೆ ಆ ಕೆಲಸವನ್ನು ಅವರೇ ಕೈಯಲ್ಲಿ ಮಾಡಿಕೊಳ್ಳುತ್ತಿದ್ದರು."

---

೧.ರೋಗರುಜಿನ ಕಷ್ಟ ಮುಂತಾದವುಗಳ ನಿವಾರಣೆಗಾಗಿ ದೇವರನ್ನು ಪ್ರಾರ್ಥಿಸಿಕೊಂಡು ಬೆಳ್ಳಿಯ ನಾಣ್ಯವನ್ನು ಅರಿಶಿನದ ಅರಿವೆಯಲ್ಲಿ ಮುಡುಪು ಕಟ್ಟುವುದು ಇದನ್ನು ಸಾಮಾನ್ಯವಾಗಿ ಪರಿಶುದ್ಧವಾದ ಜಾಗದಲ್ಲಿ ಯಾರಿಗೂ ಎಟುಕದಂತೆ ನೆಲ್ಲಿಕಾಲಿಗೆ ಕಟ್ಟುತ್ತಾರೆ.

೨.ಸೊನ್ನೆಯಿಂದ ಸೊನ್ನೆಗೆ ಪು.೨೪.

ಈಶ್ವರನ ಒಕ್ಕಲುಗಳೇ ಇರುವ ಮೈಲಾರ "ಆ ಶಿವಾಚಾರದವರೂ ಮೈಲಾರದ ಗೌಡರುಗಳೂ ಹಿಂದೆ ಲಿಂಗಕಟ್ಟಿಕೊಂಡಿದ್ದವರೇ ಅಂತೆ ಒಂದು ಸಲ ಕೆಲವರು ಮೀನಿಗೆ ಆಸೆ ಮಾಡಿ ಅವನ್ನು ಹಿಡಿದು ಬೇಯಿಸಿಕೊಂಡು ತಿಂದುಬಿಟ್ಟರಂತೆ ಆಗಲಿಂದ ಮೀನು ತಿಂದವರು ಒಕ್ಕಲಿಗರಾದರಂತೆ."[೧]

**೪.ಜನಪದ ಕಲೆ ಮತ್ತು ಕ್ರೀಡೆ;-**

ಪ್ರತಿಯೊಂದು ಜನಾಂಗದ ಸಂಸ್ಕೃತಿಯಲ್ಲೂ ಒಂದಲ್ಲ ಒಂದು ರೀತಿಯ ಕಲಾತ್ಮಕ ಅಂಶಗಳು ಕಂಡು ಬರುತ್ತವೆ. ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಿನ್ನೆಲೆಯಲ್ಲಿ ಅವುಗಳ ಸ್ವರೂಪ ವ್ಯತ್ಯಾಸ ಪಡೆದುಕೊಳ್ಳುತ್ತದೆ. ಹಳ್ಳಿಯ ಜನರ ಬದುಕು ಮೂಲಭೂತ ಜೀವನಾವಶ್ಯಕ ವಸ್ತುಗಳನ್ನು ಸಂಪಾದಿಸುವುದರಲ್ಲೇ ಕಳೆದು ಹೋಗುವುದು ಈ ಇತಿಮಿತಿಗಳೊಳಗೆ ಅವರಲ್ಲಿ ಅಡಕವಾಗಿರುವ ಕಲಾತ್ಮಕ ಅಂಶಗಳನ್ನು ಗುರುತಿಸುವ ಪ್ರಯತ್ನ ಮಾಡಬಹುದು.

ಬಯಲು ಸೀಮೆಯಲ್ಲಿ ಹೆಚ್ಚಿನ ಮನೆಗಳು ನಾಡ ಹೆಂಚಿನವು. ಎಲ್ಲೋ ಕೆಲವು ಮಂಗಳೂರು ಹೆಂಚಿನ ಮನೆಗಳಿರುತ್ತಿದ್ದವು, ಅವುಗಳ ಜೊತೆಗೆ ಮಾಳಿಗೆ ಮನೆಗಳು. ಹಣವಂತರಲ್ಲದವರು ಗುಡಿಸಿಲಿನಲ್ಲಿ ವಾಸಿಸುತ್ತಿದ್ದರು. ನಾಡ ಹೆಂಚಿನ ಮನೆಗಳಾದರೂ ಅವುಗಳು ತೊಟ್ಟಿ ಮನೆಗಳು. ಮನೆಯ ಮಧ್ಯಭಾಗದಲ್ಲಿ ಮಳೆ ನೀರು ಬೀಳುವಂತೆ ಮನೆಗೆಲ್ಲಾ ಬೆಳಕು ಬರುವಂತೆ ಸ್ಥಳ ಬಿಟ್ಟಿರುತ್ತಾರೆ. ನಿಂಗೇಗೌಡರು ಹೊಸಮನೆ ಕಟ್ಟಿಸುವ ಸಂದರ್ಭದಲ್ಲಿ ಅವರ ಹಳೇ ಮನೆಯ ವರ್ಣನೆ ಬರುತ್ತದೆ. ಎಷ್ಟೋ ಕಾಲದ ಹಿಂದೆ ಹಾಕಿದ ಒಲೆ, ಹದ್ದಿದ್ದ ಹರೀಕಲ್ಲು ಹೂಣಿದ್ದ ಒರಳುಕಲ್ಲು, ಆ ಒರಳು ಕಲ್ಲು ಆಡಿ ಆಡಿ ನುಣ್ಣಗೂ ಸಣ್ಣಗೂ ಆಗಿದ್ದ ಗುಂಡುಕಲ್ಲು, ಸಾರಿಸಿ ಸಾರಿಸಿ ಉಣಚಲೆದ್ದ ಅಡುಗೆ ಕೋಣೆ ಅದಕ್ಕೂ ಕೈಸಾಲೆಗೂ ಮಧ್ಯ ಹಾಕಿದ್ದ ಅಡ್ಡ ಗೋಡೆ ಆ ಗೋಡೆಯ ಮೇಲೆ ಒಂದೇ ಕಡೆ ಇಟ್ಟ ಹಣತೆ, ಗೂಡಿನ ಸುತ್ತಾ ತನ್ನ ಅಜ್ಜಿಯರು ಮಾಡಿದ ಕೆಮ್ಮಣ್ಣು ಸುಣ್ಣಗಳ ಚಿತ್ತಾರ ಗೋಡೆಯಲ್ಲಿ ಮಾಡಿದ್ದ ಗುರ್ಮಟ್ಟಿ ಮತ್ತು ವಾಡೆಗಳು ಹೀಗೆ ವರ್ಣನೆ ಸಾಗುತ್ತದೆ. ದನಕರುಗಳು ವ್ಯವಸಾಯದ ಅವಿಭಾಜ್ಯ ಅಂಗಗಳಾಗಿರುವುದು ಅವುಗಳ ಮೇಲೆ ವಿಶೇಷವಾದ ಮಮತೆ ರೈತರಿಗಿರುವುದು, ಬೆಳಿಗ್ಗೆ ಎದ್ದು ಹಸುವಿನ ಮುಖ ನೋಡಬೇಕೆಂಬ ಧಾರ್ಮಿಕ ನಂಬಿಕೆಗಳು ಈ ರೀತಿ ಜನಗಳ ಜೊತೆಯಲ್ಲೇ ದನಗಳು ವಾಸಿಸುವುದಕ್ಕೆ ಕಾರಣವಾಗಿರುವುದು.

ಮನೆ ಕಟ್ಟುವುದಕ್ಕೆ ಮುಂಚೆ ಆಯಾ ನೋಡುವುದು ರೂಢಿಯಲ್ಲಿ ಬಂದಿದೆ. ಜೋಯೀಷರ ಹತ್ತಿರ ಆಯಾ ಗುರುತು ಹಾಕಿಕೊಂಡು ಬರುತ್ತಾರೆ. ಲಿಂಗೇಗೌಡರು ಹೊಸಮನೆ ಕಟ್ಟುವುದಕ್ಕಾಗಿ ಜೋಯಿಷರ ಬಳಿ ಹೋದಾಗ ಅವರು ಬಡಗ ಬಾಗಿಲಾಗಬೇಕೆಂದು ಹೇಳುತ್ತಾರೆ. ಬಯಲು

---

೧.ಸೊನ್ನೆಯಿಂದ ಸೊನ್ನೆಗೆ. ಪು.೨೩

ಸೀಮೆಯಲ್ಲೂ ಇಟ್ಟಿಗೆಗಳನ್ನು ಬಳಸಿ ಕಟ್ಟುವುದಕ್ಕೆ ಆರಂಭಿಸಿದ ಅಂಶ ತಿಳಿಯುತ್ತದೆ. ಲಿಂಗೇಗೌಡರು ಹೊಸದಾಗಿ ಕಟ್ಟಿಸಿದ ದೊಡ್ಡಮನೆಯು ಸುತ್ತಮುತ್ತಲ ಹಳ್ಳಿಯಲೆಲ್ಲಾ ಸುದ್ದಿಯಾಗುತ್ತದೆ. ಮೊಟ್ಟ ಮೊದಲ ಬಾರಿಗೆ ಆ ಊರಿನಲ್ಲಿ ಬೆಂಗಳೂರಿನಿಂದ ಸೀಮೆ ಹೆಂಚನ್ನು ತಂದು ಹೊದಿಸುವುದನ್ನು ನೋಡಲು ಹೆಂಗಸರು ಮಕ್ಕಳೆಲ್ಲಾ ಸೇರುತ್ತಾರೆ.

ಜನಪದರಲ್ಲಿ ಅಸ್ತಿತ್ವದಲ್ಲಿರುವ ಕಲೆ, ಕ್ರೀಡೆಗಳು ದೈಹಿಕ, ಮಾನಸಿಕ ದಾರ್ಢ್ಯತೆ ಮತ್ತು ಸ್ವಾಸ್ಥ್ಯಗಳನ್ನು ಕಾಪಾಡಿಕೊಂಡು ಬರುವ ಸಂಗತಿಗಳಾಗಿವೆ. ಕ್ರೀಡೆಗಳಂತೂ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತವೆ. ಕಲೆಯ ವಿಚಾರದಲ್ಲಿಯೂ ಪ್ರಾದೇಶಿಕತೆಯನ್ನು ಗುರುತಿಸಬಹುದು.

ಹುಚ್ಚೀರನ 'ಸಾರುವಿಕೆ' ಕಲೆಗಾರಿಕೆಯಿಂದ ಕೊಡಿದೆ ಅವನೇ ತನ್ನ ಮುಂದಿನವರು ಸಾರುವುದನ್ನು ಕಂಡು 'ಸಾರಿಕೆ ಒಂದು ಕಲೆಕಣ್ರೋ' ಎನ್ನುತ್ತಾನೆ ಅವರ ಸಾರುವಿಕೆಯಲ್ಲಿ ವಿಶಿಷ್ಟ ಭಾವ, ಭಂಗಿ, ಮಾತುಗಾರಿಕೆಯನ್ನು ಗಮನಿಸುತ್ತೇವೆ.

ಕೃತಿಯಲ್ಲಿ ಕುಂಡಪ್ಪನ ಜೀವನ ಶೈಲಿಯಲ್ಲಿ ಕಲೆಗಾರಿಕೆಯನ್ನು ಗುರುತಿಸಬಹುದು. ಕುರುಡನಾದರೂ ಅವನು ಮಾಡದ ಕೆಲಸಗಳಿರಲಿಲ್ಲ, ಹಗ್ಗ ಹೊಸಯುವುದು ತ್ರಾಸು ಸರಿ ಮಾಡುವುದು ತ್ರಾಸು ಅಂದರೆ ಅಂದಿನ ಕಾಲದಲ್ಲಿ ಎಲ್ಲರ ಮನೆಯಲ್ಲೂ ಇಟ್ಟುಕೊಂಡಿರುತ್ತಿದ್ದ ತೂಕ ಮಾಡುವ ಸಾಮಗ್ರಿ, ಒಂದು ಕಡ್ಡಿ ಆ ಕಡೆ ಈ ಕಡೆ ಮೂರುದಾರಗಳಲ್ಲಿ ತೂಗು ಹಾಕಿದ ತಟ್ಟೆಗಳು, ಇಷ್ಟೆ ತ್ರಾಸು. ಈ ತ್ರಾಸನ್ನು ಸರಿಮಾಡಿಕೊಳ್ಳಲು ತಿಳಿಯದ ಹೆಂಗಸರು ಕುಂಡಪ್ಪನ ಕೈಗೆ ಕೊಟ್ಟರೆ, ಅರಿಶಿನದ ಕೊನೆಯನ್ನು ಸೇರಿಸಿ ತ್ರಾಸು ಸರಿ ಮಾಡುತ್ತಿದ್ದ.

**ಮಂತಿನಹುರಿ ಹೊಸೆಯುವುದು:-** ಹೆಂಗಸರು ಮೊಸರು ಕಡೆಯಲು ಉಪಯೋಗಿಸುತ್ತಿದ್ದ ಮಂತಿನ ಹುರಿಯನ್ನು ಹೊಸೆಯುವುದು ಗಂಡಸರಿಗೆ ತಿರಸ್ಕಾರವಾದರೂ ಕುಂಡಪ್ಪ ಇಲ್ಲ ಎನ್ನದೇ ಮಾಡುತ್ತಿದ್ದ, ಸೆಣಬಿನಿಂದ ಮಂತಿನ ಹುರಿಯನ್ನು ಹೊಸೆದು ಕೊಟ್ಟು ಹೆಂಗಸರ ಮೆಚ್ಚುಗೆಗಳಿಸಿದ್ದ ಎಂಬ ಮಾಹಿತಿ ನೀಡಿದ್ದಾರೆ.

ಕ್ರೀಡೆಗಳು ಮನುಷ್ಯನ ದೈಹಿಕ ಮಾನಸಿಕ ದಾರ್ಢ್ಯತೆಯನ್ನು ಮತ್ತು ಸ್ವಾಸ್ಥತೆಯನ್ನು ಕಾಪಾಡಿಕೊಂಡು ಬರುತ್ತದೆ. ಆಟಗಳು ಸಹ ಧಾರ್ಮಿಕವಾದ ಸಮಾರಂಭಗಳಲ್ಲಿ ಹಬ್ಬ ಹರಿದಿನಗಳಲ್ಲಿ ಮದುವೆ ಮುಂತಾದ ಸಂದರ್ಭಗಳಲ್ಲಿ ಆಡಲ್ಪಡುತ್ತವೆ. ಬಯಲು ಸೀಮೆಯಲ್ಲಿ ನೂರಕ್ಕಿಂತಲೂ ಹೆಚ್ಚು ವಿಧವಿಧವಾದ ಆಟಗಳಿವೆ ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಆಟಗಳನ್ನು ಈ ಹಿನ್ನೆಲೆಯಲ್ಲಿ ಪರಿಶೀಲಿಸಬಹುದು. ಆಟಗಳನ್ನು ದೊಡ್ಡವರ ಆಟಗಳು, ಮಕ್ಕಳ ಆಟಗಳು ಎಂದು ವಿಂಗಡಿಸಬಹುದು, ಹುಡುಗರು ಲಗ್ಗೆ ಚೆಂಡು, ಕತ್ತಿ ಚೆಂಡು, ಕುದುರೆ ಆಟ ಆಡುತ್ತಿದ್ದರು, ಕುದುರೆ

ಆಟವನ್ನು ಕಾದಂಬರಿಯಲ್ಲಿ ಈ ರೀತಿಯಲ್ಲಿ ಚಿತ್ರಿಸಿದ್ದಾರೆ " ಯಾರಾದರೊಬ್ಬ ಚೆಂಡನ್ನು ಪುಟ ಹಾಕಬೇಕು, ಆಗ ಯಾರು ಅದನ್ನು ಹಿಡಿಯುತ್ತಾನೋ, ಅವನು ಕುದುರೆಯ ಮೇಲೆ ಕುಳಿತವನನ್ನು ಕುದುರೆ ಮಾಡಿಕೊಂಡು ಸವಾರಿ ಮಾಡಬೇಕು. ಈ ಆಟದಲ್ಲಿ ನಂಜೇಗೌಡರ ಮಗ ಲಿಂಗಯ್ಯ ಊರ ಹುಡುಗರೊಡನೆ ಲಗ್ಗೆ ಕಪ್ಪೆ ಚೆಂಡು ಆಟಗಳಲ್ಲಿ ಮುಳುಗಿ ಮಗ್ನನಾಗಿರುವುದು ತಿಳಿದು ಬರುತ್ತದೆ.

ಹಾಗೆಯೇ ಯುಗಾದಿ ಹಬ್ಬದ ದಿನ ಊರಿನ ಯುವಕರು ಮಕ್ಕಳೆಲ್ಲಾ ಆಟದಲ್ಲಿ ತೊಡಗಿದ್ದರೆಂಬುದು ತಿಳಿದು ಬರುತ್ತದೆ. ಈ ಹಬ್ಬದ ದಿನ ಯಾವ ಆಟವನ್ನಾದರೂ ಯಾರಾದರೂ ಎಲ್ಲಾದರೂ ಆಡಬಹುದು. ಗೌಡರ ಮಗ ಎರಡು ಮಕ್ಕಳ ತಂದೆ ಲಿಂಗೇಗೌಡರು ಯುಗಾದಿ ಹಬ್ಬದ ದಿನ ಆಟದಲ್ಲಿ ತೊಡಗಿದ ವಿಚಾರವನ್ನು ಗಮನಿಸಬಹುದು ಇದಲ್ಲದೆ ಹಳ್ಳಿಯ ಹಬ್ಬಗಳಲ್ಲಿ ಕೋಲಾಟ ಕುಣಿತಗಳು ನಡೆಯುತ್ತಿದ್ದವು. ಹಬ್ಬಗಳಲ್ಲಿ ಊರ ಮುಂದಿನ ರಂಗದಲ್ಲಿ ಜನರೆಲ್ಲಾ ಸೇರಿ ತಮಟೆಯ ದನಿಗೆ ಮಕ್ಕಳು ಮುದಕರು ಎನ್ನದೇ ಎಲ್ಲರೂ ಕುಣಿಯುತ್ತಿದ್ದರು.

# ಅಧ್ಯಾಯ – ೭

## ಜನಜೀವನ ವಿಧಾನ

ಎಚ್.ಎಲ್.ನಾಗೇಗೌಡರ ಕಾದಂಬರಿಗಳು ಬಯಲು ಸೀಮೆಯ ಜೀವನ ವಿದಾನವನ್ನು ಚಿತ್ರಿಸುತ್ತವೆ. ಬಯಲುಸೀಮೆಯ ಅದರಲ್ಲೂ ಮಂಡ್ಯ ಜಿಲ್ಲೆಯ ಮತ್ತು ಸುತ್ತ–ಮುತ್ತಲ ಪ್ರದೇಶದ ಜನಜೀವನ, ರೀತಿನೀತಿಯೊಂದಿಗೆ ಬೆಸೆದುಕೊಂಡಿವೆ. ಇಲ್ಲಿಯ ಜನರ ಭಾಷೆ ಬಯಲು ಸೀಮೆಯ ಜನರು ಮಾತಾಡುವ ಭಾಷೆಗಿಂತ ಭಿನ್ನವಾಗಿದೆ. ಜೀವನ ವಿಧಾನದಲ್ಲಿ ಇತರ ಪ್ರದೇಶದ ಪ್ರಭಾವಿದ್ದರೂ ಭಾಷಿಕ ನೆಲೆಯಲ್ಲಿ ತನ್ನದೇ ಆದ ಗಟ್ಟಿನೆಲೆಯನ್ನು ಕಾಣಬಹುದು. ಇವರ ಕಾದಂಬರಿಗಳಲ್ಲಿ ಮಂಡ್ಯ ಜಿಲ್ಲೆಯ ಒಕ್ಕಲುಮಕ್ಕಳ ನಂಬಿಕೆ, ಆಚರಣೆಗಳು, ಆಹಾರಪದ್ಧತಿ, ಸಂಸ್ಕಾರವಿಧಿಗಳು, ಉಡುಗೆ–ತೊಡುಗೆ, ಕೃಷಿ ಪದ್ಧತಿ ಮೊದಲಾದವು ವೈಶಿಷ್ಯತೆಯನ್ನು ಗಳಿಸಿಕೊಂಡಿವೆ.

೧.**'ನಂಬಿಕೆ – ಸಂಪ್ರದಾಯಗಳು';–** ನಂಬಿಕೆ ಸಂಪ್ರದಾಯಗಳು ಇಲ್ಲದ ಜನಾಂಗವೇ ಇಲ್ಲವೆನ್ನಬಹುದು. ನಂಬಿಕೆ ಆಚರಣೆಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ನಾಗೇಗೌಡರ ಕಾದಂಬರಿಗಳಲ್ಲಿ ಹಳೆಯ ಮೈಸೂರು ಪ್ರಾಂತ್ಯದ ಜನರಲ್ಲಿದ್ದ ನಂಬಿಕೆ ಆಚರಣೆಗಳು, ವಿಪುಲ ಸಂಖ್ಯೆಯಲ್ಲಿ ದೊರೆಯುತ್ತವೆ. ಈ ಕಾದಂಬರಿಗಳ ಕಾಲಕ್ಕೆ ಮಧ್ಯಸೇವನೆ ಎಲ್ಲಾ ವರ್ಗದ ಜನರಲ್ಲೂ ಇರಲಿಲ್ಲ. ಒಕ್ಕಲಿಗರಲ್ಲಿ ಹೆಂಡ ಸೇವನೆಯಿರಲಿಲ್ಲ. ಕೆಲವು ಜಾತಿಯವರು ಕದ್ದು ಮುಚ್ಚಿ ಹೆಂಡ ಸೇವಿಸುತ್ತಿದ್ದರು ಒಕ್ಕಲಿಗ ಸ್ತ್ರೀಯರು ಎಂತಹ ಸ್ಥಿತಿಯಲ್ಲೂ ಮಧ್ಯಪಾನ ಮಾಡುತ್ತಿರಲಿಲ್ಲ ಎಂಬುದಕ್ಕೆ ದೊಡ್ಡ ಮನೆ ಕಾದಂಬರಿಯಲ್ಲಿ ಗೌಡರ ಹೆಂಡತಿ ಕಾಯಿಲೆಯಿಂದ ನೆರಳುತ್ತಿದ್ದಾಗ ನೀರಾ ಕುಡಿಸಲು ಹೇಳುತ್ತಾರೆ. ಪ್ರಾಣಹೋದರೂ ಅವಳು ನೀರಾ ಸೇವಿಸಲು ಒಪ್ಪುದಿಲ್ಲವೆಂದು ಗೌಡರು ಹೇಳುತ್ತಾರೆ. ಯುಗಾದಿ ಹೊಸವರ್ಷದ ಸಂತಸ ತರುವ ಹಬ್ಬ ಬಯಲುಸೀಮೆಯಲ್ಲಿ ಆ ದಿನ ರಾಗಿಕಲ್ಲುಗಳಿಗೆ ಬಿಡುವು. ಯುಗಾದಿ ಹಬ್ಬದ ದಿನ ಬೀಸಿದರೆ ವರ್ಷವೆಲ್ಲ ಬೀಸುವುದು ತಪ್ಪುವುದಿಲ್ಲ ಎಂಬ ನಂಬಿಕೆ ಈಗಲೂ ಹಳ್ಳಿಗಳಲ್ಲಿ ಹಬ್ಬದದಿನ ಎಂತಹ ಬಡವರಾದರೂ ಮುದ್ದೆ ಮಾಡುವುದಿಲ್ಲ. ಏಕೆಂದರೆ ವರ್ಷಕ್ಕೊಂದು ಹಬ್ಬದದಿನ ಮುದ್ದೆ, ಉಪ್ಸಾರು ತಿಂದರೆ ಕೊನೆಯವರೆಗೂ ಅದೇ ಉಳಿದು ಬಿಡುತ್ತದೆ ಎಂಬುದು ಅವರ ನಂಬಿಕೆ.

ದೇವಸ್ಥಾನದಲ್ಲಿ ಪೂಜೆ ಮುಗಿದ ಮೇಲೆ ಪೂಜಾರಿ ದೇವರ ಪ್ರಸಾದವೆಂದು ಹೂಕೊಟ್ಟಾಗ ಅದನ್ನು ಎಣಿಸಿ ನೋಡಿ ಸಮಸಂಖ್ಯೆಯೋ, ಬೆಸಸಂಖ್ಯೆಯೋ ಎಂಬುದರ ಮೇಲೆ ತಮ್ಮ

ಅದೃಷ್ಟವನ್ನು ನಿರ್ಣಯಿಸಿಕೊಳ್ಳುತ್ತಿದ್ದರು. ಯುಗಾದಿಯ ದಿನ ಪಂಚಾಂಗನೋಡುವುದು, ಊರಿನವರೆಲ್ಲಾ ತಮ್ಮ ಭವಿಷ್ಯವನ್ನು ತಿಳಿದುಕೊಳ್ಳುವುದು, ಸಂಪ್ರದಾಯ ಕನಸುಗಳು ತಮ್ಮ ಜೀವನದಲ್ಲಿ ಘಟಿಸುವ ಸು:ಖ-ದು:ಖಗಳ ಮುನ್ಸೂಚನೆ ಎಂದು ಜನ ನಂಬಿದ್ದರು. ದೊಡ್ಡಮನೆ ಕಾದಂಬರಿಯ ಉದ್ದಕ್ಕೂ ಈ ಕನಸುಗಳು ಆಯಾ ಜೀವಿಯ ಸಾವುನೋವಿನ ಸೂಚನೆಯಾಗಿ ಕಂಡುಬಂದಿದೆ. ದೊಡ್ಡಮನೆ ನಂಜೇಗೌಡರು ಯುಗಾದಿಯ ದಿನ ಹಗಲು ಊಟ ಮಾಡಿ ಮಲಗಿದಾಗ ಕನಸು ಕಾಣುತ್ತಾರೆ. ಕನಸಿನಲ್ಲಿ ತಾವು ದೊಡ್ಡ ಮನೆಯನ್ನು ಕಟ್ಟಿಸಿದಂತೆ, ಮನೆಯ ಪೂಜೆಯದಿನ ಹೊಸಮನೆಯ ಮೇಲೆ ಕಾಗೆಯೊಂದು ಕೂತು ಕಾಕಾ ಎಂದು ವಕ್ರದನಿಯಲ್ಲಿ ಕೂಗಿದಂತೆ, ಇದರಿಂದ ಬೆಚ್ಚಿ ಎದ್ದ ಗೌಡರಿಗದು ಶುಭವಲ್ಲವೆಂದು ಆಯಸ್ಸಿಗೆ ಕುಂದೆಂದು ಭಾವಿಸುತ್ತಾರೆ.

ಕನಸುಗಳು ಶುಭ ಅಶುಭಗಳ ಮುನ್ಸೂಚನೆ ಎಂದು ಅಂದಿನ ಜನ ಬಲವಾಗಿ ನಂಬಿದ್ದರು. ಹೊಲೆಯರ ಕೇರಿಯನ್ನು ಉತ್ತಮರು ಅಥವಾ ಇತರ ಜಾತಿಯ ಜನ ಪ್ರವೇಶಿಸಬಾರದೆಂಬ ನಂಬಿಕೆ ಬಯಲು ಸೀಮೆಯಲ್ಲೂ ಇತ್ತು. 'ದೊಡ್ಡಮನೆ' ಕಾದಂಬರಿಯಲ್ಲಿ ಗೌಡರ ಮಗ ನಾಗು, ಗೌಡರ ಆಪ್ತಸೇವಕ ಗೆಂಡೇಕಾಳನನ್ನು ಕರೆಯಲು ಹೊಲೆಯರ ಹಟ್ಟಿಗೆ ಹೋಗುತ್ತಾನೆ. ಹೊಲೆಯರಹಟ್ಟಿ ಸಮೀಪಿಸಿದಂತೆ ಅಲ್ಲಿ ಬೆಳೆದ ಹೆಮ್ಮರಗಳ ಮೇಲೆ ರಣಹದ್ದುಗಳು ಕುಳಿತಿರುವುದನ್ನು ನೋಡಿ ಹೆದರುತ್ತಾನೆ. ಹಟ್ಟಿಯ ಒಳಗೆ ಹೋಗುವಂತಿಲ್ಲವಾದ್ದರಿಂದ ಹೊರಗೆ ನಿಂತು ಕೂಗಬೇಕು ಹಾಗೆ ಕೂಗಿದ ತಕ್ಷಣ ಓಗೊಡುತ್ತಿದ್ದರು ಹಾಗೂ ಅವರ್‍ಯಾರಾದರು ಬಂದು ಏನೆಂದು ಕೇಳುತ್ತಿದ್ದರು.

ಜನರು ಪರಂಪರೆಯಿಂದ ಪಡೆದುಕೊಂಡ ಅಥವಾ ತಾವು ಕಂಡುಕೊಂಡ ಆಳವಾದ ಶ್ರದ್ಧೆ, ವಿಶ್ವಾಸವನ್ನು ನಂಬಿಕೆ ಎನ್ನಬಹುದಾಗಿದ್ದು, ಹಿಂದಿನ ಜನರಲ್ಲಿ ಅದರಲ್ಲೂ ಹಳ್ಳಿಗಳಲ್ಲಿ ಲಿಂಗಾಯಿತರು ಮತ್ತು ಬ್ರಾಹ್ಮಣರಲ್ಲಿ ಶೂದ್ರರು ಅಪಾರ ಗೌರವ ಇಟ್ಟುಕೊಂಡಿದ್ದರು ಇದಕ್ಕೆ 'ಶಿವಾಚಾರದವರ ಸೇವೆ'ಯು ಒಂದು ಉದಾಹರಣೆಯಾಗಿದೆ. ಊರಿನಲ್ಲಿನ ಮೇಲ್ಜಾತಿಯವರು ಉಂಡ ಎಂಜಲನ್ನು ಶೂದ್ರರು ತೆಗೆಯುತ್ತಿದ್ದರು ಅವರಿಂದ ಎಂಜಲನ್ನು ಮುಟ್ಟಿಸಬಾರದೆಂಬ ನಂಬಿಕೆ ಇಟ್ಟಿದ್ದರು. 'ಉಣ್ಣೋ ಹೊತ್ತಿನಲ್ಲಿ ಹಸಕೊಂಡಿರಬಾರ್ದು' ಎಂಬ ಮಾತಿನಲ್ಲಿ ಜನಪದರ ಮಾನವೀಯತೆಯನ್ನು ಗುರುತಿಸಬಹುದು.

ಕುಂಬಳಕಾಯಿ ಬಾಳೆಕಾಯಿಗಳನ್ನು ತಿಥಿಯಲ್ಲಿ ಉಪಯೋಗಿಸಲೇಬೇಕು, ಶಿವರಾತ್ರಿ ಲಗ್ನದಲ್ಲಿ ಮದುವೆಯಾದ ಗಂಡು-ಹೆಣ್ಣುಗಳು ಬೆಟ್ಟಕ್ಕೆ ಹೋಗಬೇಕು, ಅನ್ನದ ಋಣ ನೀರಿನ ಋಣ ತೀರಿದಮ್ಯಾಲೆ ಯಾರಿರ್ತಾರೇಳು ಈ ಧರೆಮ್ಯಾಲೆ ಮೊದಲಾದ ನಂಬಿಕೆಗಳು ಬಯಲು ಸೀಮೆಯ ಜನಪದರಲ್ಲಿ ಮನೆಮಾಡಿದ್ದು ದೊಡ್ಡಮನೆ ಕಾದಂಬರಿಯಲ್ಲಿ ಈ ನಂಬಿಕೆಗಳು ಸ್ಥಾನಪಡೆದಿವೆ.

**ಮೀಸಲು ಮಾಡುವುದು:-** ಮನೆ ಸಾರಿಸಿ, ರಂಗೋಲಿ ಹಾಕಿ, ದಾಸಯ್ಯನನ್ನು ಕರೆಸಿ ಸಂಖಿನ ಕೂಗು ಹಾಕಿಸಿ ಪೂಜೆ ಮಾಡಿಸುವ ಒಂದು ವಿಧಾನ. ಇದನ್ನು ಮಂಡ್ಯದ ಸುತ್ತ-ಮುತ್ತ ಇಂದಿಗೂ ಆಚರಿಸುತ್ತಾರೆ. 'ಹೊಸ ಬೆಳೆ ಮೀಸಲು' ಎಂದು ಕರೆಯುವ ಈ ಪದ್ಧತಿ ಹೊಸ ಬೆಳೆ ಅಥವಾ ಕಾಳು ಬೆಳೆದಾಗ ದಾಸಯ್ಯನನ್ನು ಕರೆಸಿ, ದೇವರಿಗೆ ಎಡೆ ಇಟ್ಟು ಧೂಪ ಹಾಕುವ ಪ್ರವೃತ್ತಿಯನ್ನು ಹೇಳುತ್ತದೆ.

**ಮುನಿ ಮಾಡುವುದು:-** (ಗದ್ದೆಯ ಬಳಿ ಪೂಜೆ ಮಾಡುವುದು) ಬಯಲು ಸೀಮೆಯಲ್ಲಿ ಇಂದಿಗೂ ಆಚರಿಸಲ್ಪಡುವ ಒಂದು ಪದ್ಧತಿ, ಮುನಿಮಾಡುವುದು ಎಂದರೆ ನಾಗರ ಪೂಜೆ ಮಾಡುವುದು ಎಂದರ್ಥ. ಜಮೀನಿನಲ್ಲಿ ಹಾವುಗಳು ಇದ್ದರೆ ಅವು ತೊಂದರೆ ಮಾಡದಿರಲೆಂದು ವರ್ಷಕೊಮ್ಮೆ ಹಾವಿನ (ಮುನಿ) ಪೂಜೆ ಮಾಡುತ್ತಾರೆ. ಮಲ್ಲೇಗೌಡರು ಗದ್ದೆ ಬಳಿ ಮುನಿ ಮಾಡಿ ಮನೆಗೆ ಬರುತ್ತಿದ್ದರು.

ಮದುವೆ ಸಂಪ್ರದಾಯದಲ್ಲಿ ಹೆಣ್ಣು ಕೊಡುವಾಗ ದುಡಿಯುವ ಗಂಡಿಗೆ ಹೆಚ್ಚು ಪ್ರಾಶಸ್ತ್ಯವಿರುವುದನ್ನು ಕಾಣಬಹುದು. ದುಡಿಯೋನಿಗೆ ಹೆಣ್ಣು ಕೊಡಬೇಕೇ ಹೋರ್ತು. . . ಗಂಡ ಎಂದರೆ ಹೆಡ್ತಿ ಬೆನ್ನಿಗೆ ಕಟ್ಕೊಂಡು 'ಮರಹತ್ತಬೇಕು' ಎಂಬುದು ಅಂದಿನವರ ಅಭಿಮತವಾಗಿತ್ತು. ಹಾಗೆಯೇ ಹೆಣ್ಣು ತರುವಾಗಲೂ ಕೆಲವು ಸಂಪ್ರದಾಯಗಳನ್ನು ಪಾಲಿಸುತ್ತಿದ್ದರು. ಒಂದೂರಿಗ್ಹೆಣ್ಣ ಎಂದಿಗೂ ಕೊಂಡಬಾರದು ಸಂದೆಯ ಸೊಪ್ಪು ಮಡುವಿನ ಗುಂಡಿನೀರ ತಂದಲ್ಲದವರತ್ತೆ ಕಳುವ್ಯಾಳು ಎಂದೂ ಒಂದು ಹೆಣ್ಣು ಕೊಂಡಬೇಕಾದ್ರು ತರಬೇಕಾದ್ರು ಒಂದು ತಿಟ್ಟಾದ್ರೂ ಮರೆಯಾಗಿರಬೇಕೆಂಬುದು ಅವರ ವಾದವಾಗಿತ್ತು.

**ಮಳೆ ಶಾಸ್ತ್ರ:-** ಮಳೆ ಬಾರದಿದ್ದರೆ ಮಳೆಗಾಗಿ ಪ್ರಾರ್ಥಿಸುವ ಸಂಪ್ರದಾಯ ಇಂದಿಗೂ ಕೆಲವೆಡೆ ಇದೆ. "ಹುಯ್ಯೋ ಹುಯ್ಯೋ ಮಳೆರಾಯ, ಹೂವಿನ ತ್ವಾಟಕೆ ನೀರಲ್ಲ" ಎಂದು ಹಾಡಿಕೊಂಡು ತಿರುಗುವುದನ್ನು ಕಾಣಬಹುದು. ನಂಬಿಕೆ ಸಂಪ್ರದಾಯಗಳು ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತ ಹೋಗುತ್ತವೆ. ಗ್ರಾಮೀಣರು ಅನೇಕ ಸಂಪ್ರದಾಯಗಳನ್ನು, ಪ್ರಶ್ನಿಸದೇ ಅನುಚಾನವಾಗಿ ನಡೆಸಿಕೊಂಡು ಬಂದದ್ದೂ ಇದೆ. ಸಂಪ್ರದಾಯಗಳಲ್ಲೆ ತಮ್ಮ ನೈತಿಕತೆಗಳನ್ನು ಗುರುತಿಸಿಕೊಂಡದ್ದು ಇದೆ.

**೨.ಸಂಸ್ಕಾರ ವಿಧಿಗಳು:-** ಜನನ ಕಾಲದಿಂದ ಪ್ರಾರಂಭವಾಗಿ ಬದುಕಿನ ಬೇರೆ ಬೇರೆ ಸಂದರ್ಭಗಳನೊಡಗೂಡಿ ಮರಣಕಾಲದವರೆಗೆ ಕೆಲವು ವಿಧಿಗಳನ್ನು ಆಚರಿಸುವ ರೀತಿ ಸಮುದಾಯದಿಂದ ಸಮುದಾಯಕ್ಕೆ ಬೇರೆ ಬೇರೆ ಬೇರೆಯಾಗಿರುತ್ತದೆ. ಜೀವಂತ ವ್ಯಕ್ತಿಗೆಮಾಡುವ ವಿವಿಧ ಕ್ರಿಯಾಚರಣೆಗಳು ಎಷ್ಟು ಮುಖ್ಯವೋ, ವ್ಯಕ್ತಿ ಸತ್ತ ನಂತರ ಮಾಡುವ ಕ್ರಿಯೆಗಳೂ ಅಷ್ಟೆ ಪ್ರಧಾನವಾಗಿರುತ್ತದೆ. ಪಂಚ ಭೂತಗಳಿಂದಾದ ಶರೀರವನ್ನು ಪಂಚಭೂತಗಳಿಗೇ ಒಪ್ಪಿಸುವುದಲ್ಲದೆ ದೇಹದಿಂದ ಹೊರಬಂದ ಆತ್ಮಕ್ಕೆ ಉತ್ತಮ ನೆಲೆಯನ್ನು ತೋರಿಸಿದಂತಾಗುತ್ತದೆ ಎಂಬ ವಿಶ್ವಾಸದಿಂದ

ಸತ್ತವನ ದೇಹಕ್ಕೆ ಸಲ್ಲಿಸುವ ಅಂತಿಮ ಗೌರವವೇ ಶವ ಸಂಸ್ಕಾರ. ಸತ್ತ ನಂತರ ಮಾಡುವ ಶಾಂತಿಗಳು,ಉತ್ತರಕ್ರಿಯಾದಿಗಳು ಆ ವ್ಯಕ್ತಿಗೆ ಸತ್ತ ಮೇಲೂ ತೋರಿಸುವ ಗೌರವಕ್ಕೆ ಸಂಕೇತಗಳಾಗಿರುತ್ತವೆ. ಕೃತಿಯಲ್ಲಿ 'ಕುಂಡಪ್ಪನ ತಾಯಿ ಸತ್ತಾಗ ಮಲ್ಲೇಗೌಡರ ಹೆಂಡತಿ ತಿಮ್ಮಾಜಮ್ಮ ಅಕ್ಕಿಯನ್ನು, ಒಂದು ಹರಿವಾಣವನ್ನು ಹಾಕಿ, ಒಂದಚ್ಚು ಬೆಲ್ಲ ಮಡಗಿ, ಸೊಡರು ಹತ್ತಿಸಿ ಅದನ್ನು ತಲೆದಸಿಯಲ್ಲಿಟ್ಟು, ಅಯ್ಯೋ ನನ್ನವ್ವ ಹೋಗಿಬತ್ತಿಯಾ; ಎಂದು ಕೈ ನಟಕಿ ಮುರಿದು ಹೆಣದ ಪಕ್ಕದಲ್ಲಿ ಕೂತಳು. ಆಮೇಲೆ ಬಂದ ಹೆಂಗಸರ ಸಹಾಯದಿಂದ ಕಾಲುಮಡಿಸಿ, ಬಟ್ಟೆನೇವರಿಸಿ ಬಾಯಿದಂಬುಲ ಸಿದ್ದ ಮಾಡಿದಳು. ಊರ ಹೆಂಗಸರು ಒಬ್ಬೊಬ್ಬರಾಗಿ ಬೊಗಸೆ ಕುಸಬಲು ಅಕ್ಕಿ ಕಟ್ಟಿಕೊಂಡು ಬಂದು ಹರಿವಾಣಕ್ಕೆ ಹಾಕಿದರು. ಶವ ಸಂಸ್ಕಾರದ ನಂತರ ಗೂಡಿನಲ್ಲಿ ಹಚ್ಚಿದ್ದ ಹಣತೆಯ ದೀಪಕ್ಕೆ ಕೈ ಮುಗಿದು ಅವರವರ ಮನೆಗಳಿಗೆ ಹೋದರು'[೧] ಎಂಬ ಮಾಹಿತಿ ಅಂತ್ಯ ಸಂಸ್ಕಾರದ ಬಗೆಗೆ ಮಾಹಿತಿ ಒದಗಿಸಿದೆ. ಸಂಪ್ರದಾಯದಂತೆ ಹನ್ನೊಂದನೆಯ ದಿನ ತಿಥಿ ಹೆಗಲಮೇಲೆ ನೀರಿನ ಹರವಿಯನ್ನು

ಭಾರವಾಗದಂತೆ ಹೊರಿಸಿ ಸುತ್ತುಸುತ್ತಿಗೆ ಕುಡಲಿನ ತುದಿಯಿಂದ ತೂತು ಕುಕ್ಕಿ ನೀರು ಸುರಿಸಿ ಕೊನೆಯ ಸುತ್ತಿನಲ್ಲಿ ದಢಾರನೆ ಎತ್ತಿ ಹಾಕಿಸಿದ್ದು, ಲಬಲಬಾ ಎಂದು ಬಾಯಿ ಬಡಿದುದು, ಈ ಎಲ್ಲಾ ದಟ್ಟವಾದ ಗ್ರಾಮ್ಯ ಅನುಭವಗಳನ್ನು ಲೇಖಕರು ಕಣ್ಮುಂದೆ ತಂದು ನಿಲ್ಲಿಸುತ್ತಾರೆ. ಕುಂಡಪ್ಪನ ತಾಯಿಯ ಉತ್ತರ ಕ್ರಿಯಾದಿ ಅವನು ಬಡವನಾದ್ದರಿಂದ ಊರೊಟ್ಟಿನ ರಾಗಿ ಅವರೆ ಕಾಳಿನಲ್ಲಿ ಮುಗಿಯಿತು ಎಂದು ಹೇಳಿ ದಿಕ್ಕಿಲ್ಲದವರಿಗೆ ಉಳ್ಳವರು ನೆರವಾಗುತ್ತಿದ್ದುದ್ದು ತಿಳಿಯುತ್ತದೆ. ಕಾಲಾ ನಂತರ ಕುಂಡಪ್ಪ ಕೊರಕಲಿಗೆ ಬಿದ್ದು ಸತ್ತಾಗ ಗುರುಮಲ್ಲಯ್ಯನವರ ನಿರ್ದೇಶನದಂತೆ ಇರುವಂತೆಯೇ ಅಲ್ಲೇ ಗುಡ್ಡದ ಮೇಲೆ ತುಂಬೆ ಗಿಡ ನೆಡಲಾಯಿತು. ತಲೆಕೊಳ್ಳಿಯನ್ನು ಕುಂಡಪ್ಪನ ಏಕೈಕ ವಾರಸುದಾರ ಚನ್ನನೇ ಹಿಡಿದು ಕುಂಡಪ್ಪನ ತಿಥಿಯೂ ಊರೊಟ್ಟಿನ ದವಸ ಧಾನ್ಯದಿಂದಲೇ ಮುಗಿಯಿತು ಎಂಬಲ್ಲಿಯೂ ಅದೇ ಅಂಶವನ್ನು ಕಾಣುತ್ತೇವೆ.

ದೊಡ್ಡ ಮನೆ ಕಾದಂಬರಿಯಲ್ಲಿ ನಂಜೇಗೌಡರು ತಮ್ಮನ್ನು ಉಳ್ಳಿ ಮಾಡುವಂತೆ ಹೇಳಿರುತ್ತಾರೆ. ಅದಕ್ಕೆ ಕಾರಣ ಅವರ ಒಳದೊಡೆಯಲ್ಲಿ ಒಂದು ಮಚ್ಚೆ ಇದ್ದುದ್ದರಿಂದ ಈ ರೀತಿ ಅಪೇಕ್ಷೆ ಪಟ್ಟಿರುತ್ತಾರೆ. ಹೊಲೆಯರ ಬಿದಿರು ಮಳೆಯಿಂದ ಬಿದಿರು ತಂದು ಚಟ್ಟ ಸಿದ್ದಪಡಿಸುತ್ತಾರೆ. ಕೆಲವು ಕಡೆ ಮರಗೆಲಸದ ಆಚಾರಿ ಸಿದ್ದ ಪಡಿಸುತ್ತಾನೆ. ಹೆಣಕ್ಕೆ ಸ್ನಾನ ಮಾಡಿಸಿ ಹೊಸ ಬಟ್ಟೆ ಉಡಿಸಿ. ಹಣೆಗೆ ವಿಭೂತಿ, ಗಂಧ ಹಚ್ಚಿ ತಲೆಗೆ ಅವರು ಸುತ್ತಿಕೊಳ್ಳುತ್ತಿದ್ದ ರುಮಾಲು ಸುತ್ತಿ ಶೃಂಗರಿಸುತ್ತಾರೆ. ನಂತರ ಶವವನ್ನು ಊರಿನೊಳಗೆ ಮೆರವಣಿಗೆಯಲ್ಲಿ ತೆಗೆದು ಕೊಂಡು ಹೋಗುತ್ತಾರೆ ಮುಂದೆ ಹೊಲೆಯರು ಹಾರೆ ತಮಟೆಗಳನ್ನು ಬಾರಿಸುತ್ತಾ ಸಾಗುತ್ತಾರೆ. ಶವವನ್ನು ಸಿದ್ಧ ಪಡಿಸಿದ ಕಟ್ಟಿಗೆಯ ಮೇಲಿಟ್ಟು ತಂದೆಯಾದರೆ ಹಿರಿಯ ಮಗ ತಾಯಿಯಾದರೆ ಕಿರಿಯ ಮಗ ಬೆಂಕಿ ಕೊಡುತ್ತಾರೆ ನಂತರ

೧.ಸೊನ್ನೆಯಿಂದ ಸೊನ್ನೆಗೆ ಪುಟ ೩೮

ಹತ್ತಿರದಲ್ಲಿ ಹರಿಯುವ ನೀರಿನಲ್ಲಿ ಕೈಕಾಲು ತೊಳೆದುಕೊಂಡು ಸತ್ತ ವ್ಯಕ್ತಿಯ ಮನೆ ಮುಂದೆ ದೀಪವನ್ನು ಹಚ್ಚಿಟ್ಟು ನೋಡಿಕೊಂಡು ಅವರವರ ಊರಿಗೆ ಹೋಗುತ್ತಾರೆ. ಆ ದಿನ ಬಂದ ನೆಂಟರಾರೂ ಅಲ್ಲಿ ಉಳಿಯಬಾರದು ಆ ದಿನವನ್ನು ನೆಲಬೆಂದ ದಿನವೆಂದು ಕರೆಯುತ್ತಾರೆ. ಶವವನ್ನು ಒತ್ತವರು ನೀರು ಮುಳುಗಿ ಮಡಿ ಬಟ್ಟೆ ಧರಿಸಿ ದೇವರ ಗುಡಿಗೆ ನಮಸ್ಕಾರ ಮಾಡಿಕೊಂಡು ನಂತರ ಬಂದು ಹಣತೆಗೆ ಕೈ ಮುಗಿಯುತ್ತಾರೆ. ಸತ್ತ ಮನೆಯವರ ದಾಯಾದಿಗಳು ಅವರಿಗೆಲ್ಲ ಸ್ನಾನ ಊಟದ ವ್ಯವಸ್ಥೆಮಾಡುತ್ತಾರೆ. ಆದಿನದ ಖರ್ಚನ್ನು ಅವರೇ ಹಾಕಿರುತ್ತಾರೆ ನಂತರ ಅದನ್ನು ಮರಳಿ ಪಡೆದುಕೊಳ್ಳುತ್ತಾರೆ.



ಹನ್ನೊಂದನೆಯ ದಿನದ ತಿಥಿಯ್ನ ಮಾಡುತ್ತಾರೆ ಬೆಳಗ್ಗೆ ಉಳ್ಳಿ ಮಾಡಿದ ಸ್ಥಳದಿಂದ ಅಸ್ತಿ ಮತ್ತು ಬೂದಿಯನ್ನು ತೆಗೆದು ಹೊಸ ಗಡಿಗೆಗಳಿಗೆ ತುಂಬುತ್ತಾರೆ. ನೂರೊಂದು ಮೊಗೆ ನೀರು ಹಾಕಿ ನೂರೊಂದು ಹೂವು ಹಾಕಿ, ಸುಟ್ಟ ಸ್ಥಳಮಧ್ಯೆ ತುಳಸಿ ಗಿಡ ನೆಡುತ್ತಾರೆ ಮೊಸರನ್ನದ ಐದು ಎಡೆ ಇಡುತ್ತಾರೆ. ಇದಕ್ಕೆ ಕಾಗೆಕೂಳು ಹಾಕುವುದು ಎನ್ನುತ್ತಾರೆ. ಹಿರಿಯ ಮಗನಾದವನು ಹೊಸಗಡಿಗೆಯಲ್ಲಿ ನೀರನ್ನು ಹೆಗಲ ಮೇಲೆ ಹೊತ್ತುಕೊಂಡು ಎರಡೂ ಕೈಯಲ್ಲಿ ಹಿಡಿದುಕೊಳ್ಳುತ್ತಾನೆ. ಕುಡುಲು ತುದಿಯಿಂದ ಗಡಿಗೆಯ ಮೇಲೆ ತೂತು ಕುಕ್ಕುತ್ತಾರೆ. ನೀರು ಸೋರಿಸುತ್ತಾ ಬಂದು ಸುತ್ತು ಬಂದ ಮೇಲೆ ಅದರ ಕೆಳಗೆ ತೆಂಕ ತಲೆಯ ಬಳಿಯಟ್ಟು ಕಲ್ಲಿನ ಮೇಲೆ ಅದನ್ನು ದೊಪ್ಪೆಂದು ಎತ್ತು ಹಾಕಿ ಬಾಯಿ ಬಡಿದುಕೊಳ್ಳುತ್ತಾರೆ ಹಿಂದಿರುಗಿನೋಡದೆ ಮನೆ ಕಡೆ ಹೋಗುತ್ತಾರೆ ಅಲ್ಲಿ ಹಜಾಮನಿಂದ ತಲೆ ಬೋಳಿಸುತ್ತಾರೆ. ಕೆಲವು ಕಡೆ ಮಾತ್ರ ಈ ಸಂಪ್ರದಾಯ ಇರುತ್ತದೆ. ಬಹುತೇಕ ಕಡೆ ಸ್ಮಶಾನದಲ್ಲೇ ಈ ಕೆಲಸಗಳನ್ನೆಲ್ಲಾ ಮಾಡುತ್ತಾರೆ. ಸ್ನಾನ ಮಾಡಿ ಬಟ್ಟೆ ಹಾಕಿಕೊಂಡವನು ಸಂಜೆ ಕೂಳು ಹಾಕಲು ಸ್ಮಶಾನಕ್ಕೆ ಹೋಗುವಂತಿಲ್ಲ ಸ್ಮಶಾನಕ್ಕೆ ಹೋಗಿ ಬಂದ ತಾಯಿಗೆ ಆ ಕೂಡಲೇ ಮುಖ ತೋರಿಸಬಾರದು.

**೩) ಉಡುಗೆ – ತೊಡುಗೆ:–** ಆಧುನಿಕ ಸಂಪರ್ಕ–ಸಾಧನಗಳು ಸಹಜವಾಗಿ ಕೈಗೆಟುಕುವ ಇಂದಿನ ದಿನಗಳಲ್ಲಿಯೂ ಮಲೆನಾಡು, ಕರಾವಳಿ, ಬಯಲು ಪ್ರದೇಶಗಳ ಜನತೆಯ ಉಡುಗೆ–ತೊಡುಗೆಗಳಲ್ಲಿ ಸಾಕಷ್ಟು ವ್ಯತ್ಯಾಸವಿರುವುದನ್ನು ಗುರುತಿಸಬಹುದು ನಾಗೇಗೌಡರು ತಮ್ಮ ಕಾದಂಬರಿಗಳಲ್ಲಿ ಬಯಲು ಸೀಮೆಯ ಸಾಮಾಜಿಕ ಬದುಕನ್ನು ಚಿತ್ರಿಸುತ್ತಾ ಅಂದಿನ ವೇಭೂಷಣಗಳ ವಿವರಗಳನ್ನು ಕೊಡುತ್ತಾರೆ. ಆಯಾಯ ಪ್ರದೇಶದ ಉಡುಗೆಗಳು ಅಲ್ಲಿನ ಪರಿಸರವನ್ನು ಅವಲಂಬಿಸಿವೆ ಅಲ್ಲದೆ ಅಂದಿನ ಸಮಾಜದ ಸಿತ್ಯಂತರವನ್ನು ದಾಖಲಿಸುತ್ತವೆ.

ಹಿಂದೆ ಜನರ ಉಡುಗೆಗಳು ಬಲು ಸಾಮಾನ್ಯ ರೀತಿಯಲ್ಲಿರುತ್ತಿದ್ದವು. ಹೊಲೆಯರ ಮಗ್ಗದಲ್ಲಿ ನೇಯ್ದ ಹೊಸದಟ್ಟಿ ಒಂದನ್ನು ಉಟ್ಟಿ, ಒಂದನ್ನು ಹೊದೆಯುತ್ತಿದ್ದರು. ಹೆಂಗಸರು ಉಡುವ

ಸೀರೆಯನ್ನು ಹೊಲೆಯರು ನೇಯ್ದು ಕೊಡುತ್ತಿದ್ದರು. ಬಣ್ಣದ ಸೀರೆಗಳೇ ಇರಲಿಲ್ಲ ಹವಳ, ಕರಿಮಣಿ, ದಂತಗಳನ್ನು ಬಳಸುತ್ತಿದ್ದರು. ಕಾಲಕ್ರಮೇಣ ಆ ಪ್ರದೇಶಗಳ ಜನರ ಉಡುಗೆ ತೊಡುಗೆ ಅಲಂಕಾರಗಳಲ್ಲಿ ಸಾಕಷ್ಟು ಬದಲಾವಣೆಗಳಾದವು.

ದೊಡ್ಡಮನೆ ಕಾದಂಬರಿಯಲ್ಲಿ ಲಿಂಗು ಊರಿನಲ್ಲಿ ಆಟವಾಡಿಕೊಂಡು ಕಾಲಕಳೆಯುತ್ತಿದ್ದಾಗ ಅಂಗಿ ಚಡ್ಡಿಯಲ್ಲಿರುತ್ತಿದ್ದ ಕ್ರಮೇಣ ಲಿಂಗೇಗೌಡರಾಗಿ ಊರು ಸುತ್ತ ವ್ಯವಹಾರ ಮಾಡುವ ಮನುಷ್ಯನಾದಾಗ ಅದರಲ್ಲೂ ನಾಲ್ಕನೆಯ ಮದುವೆಯಾದ ಮೇಲೆ ಮಾರ್ಪಾಟು ಮಾಡಿಕೊಂಡರು. "ಸಾಮಾನ್ಯ ಉಡುಗೆಯನ್ನು ಪೂರ್ತಬಿಟ್ಟು ಕಚ್ಚೆ, ಪಂಚೆ ಹಾಕಲಾರಂಭಿಸಿದರು. ಹೊರಗಡೆ ಹೋದಾಗ ತಲೆಗೆ ರೇಷ್ಮೆ ವಸ್ತ್ರ ಸುತ್ತುವ ಬದಲು ಮದುವೆಗೆ ತಂದ ಕಲಾಪತ್ತಿನ ಪೇಟ ಸುತ್ತಲಾರಂಭಿಸಿದರು".

ಸ್ತ್ರಿಯರು ಗಾಜಿನ ಬಳೆಗಳನ್ನು ಧರಿಸುತ್ತಿದ್ದರು ಕರಿಯ ಬಳೆ, ಅರಸಿನ, ಕುಂಕುಮ ಮುತ್ತೈದೆಯ ಸಂಕೇತವಾಗಿತ್ತು. ಹೆಂಗಸರು ಹಚ್ಚೆಹುಯ್ಸಿಕೊಳ್ಳುತ್ತಿದ್ದರು. ದೊಡ್ಡಮನೆ ಕಾದಂಬರಿಯಲ್ಲಿ ಕೆಂಗಣ್ಣ ರತ್ನಳಿಗೆ ಮುಂಗೈ ಮೇಲೆ ಅರಗಿಣಿ ಹಚ್ಚೆಯನ್ನು ಹುಯ್ಸುತ್ತಾನೆ. ಹಚ್ಚೆ ಹುಯ್ಯುವ ಕೊರಮಿತಿ ಬೇಕಾದವರಿಗೆ ಅವರ ಪ್ರೀತಿಯ ಕುರುಹಾಗಿ ಹಚ್ಚೆ ಹುಯ್ಸಿಸುವುದುಂಟು. ಹೊಲೆಯರು ನಿತ್ಯ ಹರಕಲು ಚಡ್ಡಿಯನ್ನು ಹಾಕುತ್ತಿದ್ದರು. ನೆಂಟರ ಊರಿಗೆ ಹೋಗುವಾಗ ದಟ್ಟಿ ಸುತ್ತಿ ಹೊಸ ದುಪ್ಪಟಿ ಹೊದ್ದುಕೊಂಡು ತಲೆಗೆ ಕೆಂಪು ವಸ್ತ್ರವನ್ನು ಸುತ್ತು ಕೊಳ್ಳುತ್ತಿದ್ದರು.

ಮದುವೆ, ಹಬ್ಬಗಳ ಆಚರಣೆಯಲ್ಲಿ ಸುಂದರವಾದ ವಸ್ತ್ರಗಳನ್ನು ಬೇರೆ ಊರುಗಳಿಂದ ತರಿಸಿ ಧರಿಸುತ್ತಿದ್ದರು. ದೊಡ್ಡಮನೆ ಕಾದಂಬರಿಯಲ್ಲಿ ನಿಂಗೇಗೌಡರು ತಮ್ಮ ಕೆಂಗಣ್ಣನ ಮದುವೆಗಾಗಿ ಬೆಳ್ಳೂರಿನಿಂದ ಬಾಣ ಬಿರುಸು ರಾಂಡೋಳು ವಾದ್ಯ ತರಿಸಿದ್ದರು. ಮೊಣಕಾಲೂರಿನಿಂದ ಎರಡು ರೇಷ್ಮೆ ವಸ್ತ್ರ ತರಿಸಿದ್ದರು.

ಹಿಂದಿನವರು ಪಂಚೆ ಅಥವಾ ದಟ್ಟಿಯನ್ನು ಸುತ್ತದೆ ಕಚ್ಚೆಪಂಚೆ ಹಾಕುತ್ತಿದ್ದರು. ದಟ್ಟಿ ಸುತ್ತುವುದು ಶಾಸ್ತ್ರ ಸಮ್ಮತವಲ್ಲ ಎಂಬ ಕಾರಣಕ್ಕೆ ಅವರು ಹಾಗೆ ಮಾಡುತ್ತಿದ್ದರು.[೧] ಹೆಂಗಸರು ರವಿಕೆಯನ್ನು ತೊಡುತ್ತಿರಲಿಲ್ಲ ಎಂಬ ಉಲ್ಲೇಖನವನ್ನು ಗಮನಿಸಿದರೆ ಹೊಲೆದ ಬಟ್ಟೆ ಇತ್ತೀಚಿನದು ಎಂದು ವೇದ್ಯವಾಗುತ್ತದೆ. ಬಟ್ಟೆಯನ್ನು ಹೊಲೆಯಬೇಕಾದರೆ ಕೈಯಿಂದಲೇ ಮಾಡಿಕೊಳ್ಳುತ್ತಿದ್ದರು ಶಿವಾಚಾರದವರಿಗೂ ಒಕ್ಕಲಿಗರಿಗೂ ಯಾವುದೇ ವ್ಯತ್ಯಾಸವಿರಲಿಲ್ಲ ಅವರು ಬೇಸಾಯ ಗಾರರಾಗಿದ್ದುದರಿಂದ ಹಾಸುವುದು, ಹೊದೆಯುತ್ತಿದ್ದುದು ಕುರಿಕಂಬಳಿಯನ್ನು ಶಿವಾಚಾರದವರಾದ

---

೧ ಸೊನ್ನಯಿಂದ ನೊನ್ನೆಗೆ ಪು ೨

ಗುರುಸಿದ್ದಯ್ಯನವರ ಮೈಮೇಲೆ ಕಡಿಮೆಬಟ್ಟೆ ಇರುತ್ತಿತ್ತು ಎಂದು ಉಡುಗೆ ಸಂಬಂಧದ ಮಾಹಿತಿಗಳು ಗರಿಬಿಚ್ಚಿಕೊಂಡಿವೆ.

ಅಂದಿನ ಜನರ ಉಡುಗೆ-ತೊಡುಗೆಗಳು ಸರಳವಾಗಿದ್ದವು. ಹಣವುಳ್ಳವರೂ ಬಾಹ್ಯ ಅಲಂಕಾರಕ್ಕೆ ಬೆಲೆಕೊಡುತ್ತಿರಲಿಲ್ಲ. ಬೆಳ್ಳಿ ಒಡವೆಗಳನ್ನೇ ಹಾಕಿಕೊಳ್ಳದ, ಚಿನ್ನದ ಒಡವೆಗಳನ್ನು ಕಣ್ಣಿಂದಲೇ ನೋಡದವರಿದ್ದರು. ಕರಿಮಣಿ, ತಾಳಿ, ಕಿವಿಗೆ ಓಲೆ ಧರಿಸುತ್ತಿದ್ದುದು ರೂಢಿಯಾಗಿತ್ತು. ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯಲ್ಲಿನ ಚನ್ನನ ಹೆಂಡತಿ ಚೌಡಿ ಅನುಕೂಲಸ್ಥಳಾದರೂ ಆಭರಣಗಳನ್ನು ಕಣ್ಣಿಂದಲೇ ನೋಡಿ ಸುಮ್ಮನಾಗಬೇಕಾಗಿತ್ತು ಇಷ್ಟಾಗಿಯೂ ನಾಗೇಗೌಡರ ಈ ಕಾದಂಬರಿಗಳಲ್ಲಿ ಸಾಂಪ್ರಾದಾಯಿಕ ಆಭರಣಗಳಾದ ಚಿನ್ನದ ಡಾಬು, ವಂಕಿ, ಅಡ್ಡಿಕೆ, ಜೋಮಾಲೆ ನಾಗರು, ಕಾಸಿನಸರ, ಕಂಠೀಹಾರ, ಗೋಣಸು ಇತ್ಯಾದಿಗಳ ಮಾಹಿತಿಯಿದೆ.

**೪ ಆಹಾರ ಪದ್ಧತಿ:-** ಎಚ್.ಎಲ್. ನಾಗೇಗೌಡರ ಕಾದಂಬರಿಗಳಲ್ಲಿ ಮಂಡ್ಯ ಜಿಲ್ಲೆಯ ಸುತ್ತ ಮುತ್ತಲ ಆಹಾರದ ವೈಶಿಷ್ಯವನ್ನು ಕಾಣಬಹುದಾಗಿದೆ. ಅಡುಗೆ-ಆಹಾರ ಆಯಾಯ ಪ್ರದೇಶದ ವಾಯುಗುಣ. ಭೂಗುಣ, ನೀರು ಸರಬರಾಜುಗಳನ್ನು ಅವಲಂಬಿಸಿರುತ್ತದೆ. ನೀರಾವರಿ ಸೌಲಭ್ಯ ಇಲ್ಲದಿದ್ದುದರಿಂದ ರಾಗಿ ಮತ್ತು ಅವರೇಕಾಳು ಪ್ರಧಾನ ಬೆಳೆಯಾಗಿದ್ದವು. ಆದ್ದರಿಂದ ರಾಗಿಮುದ್ದೆ ಪ್ರಧಾನ ಆಹಾರ. ಒಕ್ಕಲ ಮಕ್ಕಳ ಊಟೋಪಚಾರದ ವಿಚಾರಗಳು ದಂಡಿಯಾಗಿ ಚಿತ್ರಣಗೊಂಡಿದ್ದು, ಅವರ ಆಹಾರ, ಅದನ್ನು ಬಳಸುವ ಪರಿ ವೈಶಿಷ್ಟ್ಯ ಪೂರ್ಣವಾಗಿದೆ.

ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯಲ್ಲಿ ನಾಗೇಗೌಡರು ಊಟಮಾಡುವ ವಿಧಾನವನ್ನು ವರ್ಣಿಸಿದ್ದಾರೆ. ಮಲ್ಲೇಗೌಡರು ಊಟಮಾಡುವಾಗ ಹೆಂಡತಿ ಕೊಟ್ಟ ಬಿಸಿ ಬಿಸಿ ರೊಟ್ಟಿಯನ್ನು ಎಡಗೈ ಅಂಗೈ ಮೇಲೆ ಇಟ್ಟುಕೊಂಡು ಅದರ ಮೇಲಿದ್ದ ಹುಚ್ಚೆಳ್ಳು ಕಾರ ಮತ್ತು ಬಿಸಿಗೆ ಕರಗುತ್ತಿದ್ದ ಬೆಣ್ಣೆಯಲ್ಲಿ ರೊಟ್ಟಿ ಚೂರನ್ನು ಅದ್ದಿ ತಿನ್ನಲಾರಂಭಿಸಿದರು ತಿಂದಾದ ಮೇಲೆ ಒಂದು ಕಂಚಿನ ಲೋಟದಲ್ಲಿ ತಂದಿಟ್ಟ ಮಜ್ಜಿಗೆಯನ್ನು ಗಟಗಟಕುಡಿದರು..."[೧] ಎನ್ನುವುದನ್ನು ಗಮನಿಸಿದರೆ ಮಜ್ಜಿಗೆಯನ್ನು ಕುಡಿಯುವುದರಿಂದ ದಾಹದ ಇಳಿಕೆಯಾಗುವುದನ್ನು ಜನಪದರು ಅರಿತಿದ್ದರು.

ಉಪ್ಸಾರು, ಮಸೊಪ್ಪು, ರಾಗಿಮುದ್ದೆ ಈ ಪ್ರದೇಶದ ವಿಶೇಷ ಅಡುಗೆಗಳು. "ಆಗಿನ ಕಾಲದಲಿ ಅನ್ನಕ್ಕಿಂತ ಹಿಟ್ಟು ಮುಖ್ಯವಾಗಿತ್ತು. ಅನ್ನಭೋಗ್ಯ ವಸ್ತುವಾಗಿ, 'ಹೊಟ್ಟೆ ತುಂಬ ಹಿಟ್ಟು, ಬಾಯ್ತುಂಬ ಅನ್ನ' ಎಂಬುದು ಬದುಕಿನ ದಾರಿಯಾಗಿತ್ತು."[೨] ಎನ್ನುವಲ್ಲಿ ನೀರಾವರಿ ಸೌಲಭ್ಯವಿಲ್ಲದ (ಅಂದು)

---

೧."ಸೊನ್ನೆಯಿಂದ ಸೊನ್ನೆಗೆ. ಪು.೬೯

೨.ಅದೇ. ಪು. ೭೪

ಮಂಡ್ಯಜಿಲ್ಲೆಯ ಜನರಿಗೆ ಅನ್ನ ಕೈಗೆಟುಕದಾಗಿದ್ದುದನ್ನು ಈ ಕೃತಿ ದಾಖಲಿಸಿದೆ. ಚನ್ನ ಚನ್ನೇಗೌಡನಾಗುವ ಮೊದಲು ಅವರಿವರ ಮನೆಯ ತಿರುಕನಾಗಿದ್ದಾಗ ಒಣರೊಟ್ಟಿ, ತಂಗಳು ಹಿಟ್ಟನ್ನು ತಿನ್ನುತ್ತಿದ್ದರು. ಮಲ್ಲೇಗೌಡರ ಹೆಂಡತಿ ತಿಮ್ಮಾಜಮ್ಮ ಸೀಗಡಿ ಹಾಕಿ ಮಾಡಿದ ಮಸೊಪ್ಪನ್ನು ಮೂರು ದಿನ ನೆನಸಿಕೊಳ್ಳುತ್ತಾರೆ.. ಸೀಗಡಿ ಹಾಕಿ ಮಾಡಿದ ಮಸೊಪ್ಪು ಬಹಳ ರುಚಿಕರವಾಗಿರುತ್ತಿತ್ತು. ಕಲ್ಲೊಗ್ಗರಣೆಯನ್ನು ಹಾಕುವುದು, ಸಾರಿನ ಮಡಕೆಗೆ ಅದ್ದುವುದು ವಿಶೇಷವಾಗಿತ್ತು. ಬೇಯಿಸಿದ ಹುರುಳಿಕಾಳು-ಮಜ್ಜಿಗೆಯೂ ಊಟದ ಒಂದಂಶವಾಗಿದ್ದವು.

ಬಯಲುಸೀಮೆಯ ವಿಶೇಷವಾದ ಮತ್ತೊಂದು ಅಡುಗೆ ಮಾಂಸಾಹಾರ ಬಯಲು ಸೀಮೆಯಲ್ಲಿ ತಾವು ಬೆಳೆದ ಬೆಳೆಯನ್ನು ಉಳಿಸಿಕೊಳ್ಳಲು ಮತ್ತು ಕೆಲವು ಸಲ ಆಹಾರಕ್ಕಾಗಿ ಬೇಟೆಯಾಡುತ್ತಿದ್ದರು. ಹಂದಿ, ಮೀನು, ನಳ್ಳಿ ಮೊದಲಾದವುಗಳನ್ನು ಬೇಟೆಯಾಡುತ್ತಿದ್ದರು. ದೊಡ್ಡಮನೆ ಕಾದಂಬರಿಯಲ್ಲಿ ಕರಿಯಣ್ಣನ ತಮ್ಮ ಪೂಜಾರಿ ಪುಟ್ಟಯ್ಯ ಯಾವಾಗಲೂ ಮೀನು ಬೇಟೆಯಾಡುತ್ತಿರುತ್ತಾನೆ. ಅವನ ನಿಜವಾದ ಹೆಸರು ಹೊರಟುಹೋಗಿ ಅವನನ್ನು ಎಲ್ಲರೂ ಮೀನುಗುಂಡಿ ಎಂದು ಕರೆಯುತ್ತಾರೆ.

ಕೋಳಿಸಾರಿನ ಊಟ ಬಹಳ ಪ್ರಸಿದ್ಧಿ ಪಡೆದ ಆಹಾರವಾಗಿತ್ತು. ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯ ನಾಯಕ ಮನಸೋತಿದ್ದು ಇಂತಹ ಕೋಳಿಸಾರಿಗೆ. ಕೋಳಿಸಾರು ಎಂದರೆ ಈತ ಇಡೀ ಸಾಲವನ್ನೇ ಮನ್ನಾ ಮಾಡಿಬಿಡುವಂತಹವನು. ಮೂಡ್ಲಗಿರಿಗೌಡನ ಮನೆಯ ಕೋಳಿಸಾರೆಂದರೆ ಇಡೀ ಸಾಲವನ್ನೇ ಅದಕ್ಕಾಗಿ ಬಿಟ್ಟರೂ ಚಂತೆಯಿರಲಿಲ್ಲ. ಅವನ ಹೆಂಡತಿ ಕೋಳಿಸಾರು ಮಾಡಿದಳೆಂದರೆ ಆ ಊರಿನ ಶಿವಾಚಾರದವರೆಲ್ಲ 'ಈ ಲಿಂಗ ಕಟ್ಟಿಕೊಂಡು ಎಂಥ ಎಡವಟ್ಟು ಕೆಲಸ ಮಾಡಿಕೊಂಡು ಬುಟ್ಟೆ' ಎಂದು ಅಂದುಕೊಳ್ಳುವಂತೆ ಮಾಡುತ್ತಿತ್ತು"[೧]

ಆಧುನಿಕ ಬದುಕಿನ ಸೌಲಭ್ಯ ಮತ್ತು ನಾಗರೀಕ ಜೀವನದ ಪ್ರೇರಣೆಯಿಂದ ಅದೆಷ್ಟೋ ಅಡುಗೆಗಳು, ಆಹಾರ ಪದ್ಧತಿಗಳು ಮರೆಯಾಗಿದ್ದು, ಈ ಜನಪದರ ಅಡುಗೆಗಳನ್ನು ಜನಪದ ವಿದ್ವಾಂಸರು, ಸಂಗ್ರಹಕಾರರು ತುರ್ತಾಗಿ ಕ್ರೂಢೀಕರಿಸಿದರೆ ಜಾನಪದ ಮಹತ್ತನ್ನು ಉಳಿಸಿಕೊಳ್ಳಬಹುದು.

---

೧ ಸೊನ್ನೆಯಿಂದ ಸೊನ್ನೆಗೆ ಪು. ೧೯೦

# ಅಧ್ಯಾಯ – ೮

## ಕಾದಂಬರಿಗಳ ಭಾಷೆ, ಶೈಲಿ

ಎಚ್.ಎಲ್.ನಾಗೇಗೌಡರ ಕಾದಂಬರಿಗಳು ಪ್ರಾದೇಶಿಕ ಭಾಷೆಯ ಬೆಡಗನ್ನು ಮೈಗೂಡಿಸಿಕೊಂಡು ಅವತರಿಸಿದ ಕೃತಿಗಳಾಗಿವೆ. ಈ ಕಾದಂಬರಿಗಳ ಅವಲೋಕನದಿಂದ ಒಂದು ಅರ್ಥ ಕೋಶವನ್ನು ತೆರೆಯುವ ಸಾಧ್ಯತೆಯಿದೆ. ಅಪೂರ್ವವಾದ ಬಯಲು ಸೀಮೆಯ ಪದ, ನುಡಿಗಟ್ಟು, ಬೈಗುಳ, ಗಾದೆಗಳ ಆಗರಗಳಾಗಿವೆ. ಆಡುಮಾತಿಗೂ ಜನರ ಜೀವನಕ್ಕೂ ಅರ್ಥಪೂರ್ಣವಾದ ಸಂದರ್ಭ ಏರ್ಪಡುವುದರಿಂದ ಗ್ರಾಮೀಣ ಭಾಷೆಯ ಸತ್ವವನ್ನು, ಮಣ್ಣಿನ ಗುಣವನ್ನು ಉಳಿಸಿಕೊಂಡು ಅನ್ಯೂನ್ಯತೆಯಿಂದ ಕೂಡಿವೆ. ಈ ಕಾದಂಬರಿಗಳಲ್ಲಿ ಬಂದಿರುವ ಪಡೆನುಡಿಗಳು ಪ್ರಾದೇಶಿಕ ವೈಶಿಷ್ಟ್ಯತೆಯಿಂದ ಕೂಡಿವೆ.

ಪ್ರಾದೇಶಿಕ ಕಾದಂಬರಿಗಳ ಆವರಣವನ್ನು ಸೃಷ್ಟಿಸುವಲ್ಲಿ ಭಾಷೆ ಬಹುಮುಖ್ಯ ಪಾತ್ರವಹಿಸುತ್ತದೆ. ಆ ಪ್ರದೇಶದ ನಂಬಿಕೆ, ನಡವಳಿಕೆ, ರೀತಿ, ನೀತಿ, ಪ್ರಚಲಿತ, ನುಡಿಗಟ್ಟು ಇವೆಲ್ಲಾ ಭಾಷಾ ಮಾಧ್ಯಮದ ಮೂಲಕವೇ ಹೊರಬರಬೇಕು ವಿಷಯದ ಸ್ಪಷ್ಟತೆಗಾಗಿ ಗಾದೆಗಳು, ಪಡೆನುಡಿಗಳು ಊರುಗೋಲಾಗಿ ಬರುತ್ತವೆ. ಕಾದಂಬರಿಗಳ ಭಾಷೆ ಬಯಲುಸೀಮೆಯ ಜನರ ಆಡುಭಾಷೆಯಾಗಿದ್ದು, ಪ್ರತಿಯೊಂದು ಪದವೂ ಗ್ರಾಮಭಾಷೆಯ ಮೂಲ ಸತ್ವವನ್ನು ಮೈಗೂಡಿಸಿಕೊಂಡು ಜೀವಂತವಾಗಿರಿಸಿವೆ.

**೧.ಗಾದೆಗಳು:-**

ಗಾದೆಗಳು ಜಾನಪದ ನುಡಿಮುತ್ತುಗಳು ಆಕಾರದಲ್ಲಿ ವಾಮನ ಅರ್ಥದಲ್ಲಿ ತ್ರಿವಿಕ್ರಮವಾಗಿರುವ ಗಾದೆ ಜನಪದ ಜೀವನದ ಸಾರಸರ್ವಸ್ವವನ್ನೆಲ್ಲಾ ಭಟ್ಟಿ ರೂಪದಲ್ಲಿ ಒಳಗೊಂಡಿರುವ ರಸಘಟ್ಟಿ ಗಾದೆಗಳು ಉತ್ತಮ ನುಡಿಗಟ್ಟು ಸೂಕ್ತ ಸಂದರ್ಭದಲ್ಲಿ ತಾಳಿದ ಯೋಗ್ಯ ನಿರ್ಣಯಗಳಂತಿವೆ ಎಂಬ ಮಾತು ಗಮನಾರ್ಹ. ದೊಡ್ಡ ಮನೆ ಕಾದಂಬರಿಯಲ್ಲಿ ಗಾದೆಗಳು ಹೆಜ್ಜೆ ಹೆಜ್ಜೆಗೂ ಎದುರಾಗುತ್ತವೆ. ವಿಚಾರಿಸಿದಷ್ಟೂ ಅರ್ಥದ ಅಲೆಗಳನ್ನು ಎಬ್ಬಿಸುತ್ತದೆ.

ನನ್ನೂರಿನ ದೊಡ್ಡ ಮನೆಯಲ್ಲಿ ಮರಿ ಹಬ್ಬದ ದಿನ ಬಾಡಿನ ಊಟಕ್ಕೆ ಬಂದಿದ್ದ ನೆಂಟರು ಮಾತಾಡುತ್ತಾ ಕುಳಿತಿರುವಾಗ ಪರಸ್ಪರ ಕ್ಷೇಮ ಸಮಾಚಾರಗಳನ್ನು ವಿಚಾರಿಸುತ್ತಾ ಕೊನೇಹಳ್ಳಿ ತಿಮ್ಮಣ್ಣನನ್ನು ರಾಗಿ ಎಷ್ಟಾಯಿತೋ ಈ ವರ್ಷ! ಇಪ್ಪತ್ತು ಖಂಡುಗ ಆಯ್ತು! ಮಾವಯ್ಯ ಸಂತೋಷ

ಸಂತೋಷ ಹಂಗೆ ಚೆನ್ನಾಗಿ ಬೆಳೀಬೇಕು, ತಿನ್ನಬೇಕು, "ನೆಲಿಮ್ಯಾಗಲ ಬೆಣ್ಣೆಗೂ, ಒಲೆ ಮ್ಯಾಗಲ ರೊಟ್ಟಿಗೂ ಸಮಾನವಾಯ್ತು, ಅನ್ನಂಗೆ ಇರಬಾರ್ದು" ಎಂದು ಹೇಳುತ್ತಾರೆ. ಹಳ್ಳಿಯ ಜನ ಸಮೃದ್ಧಿಯಾಗಿ ಬೆಳೆದು ಸಮೃದ್ಧಿಯಾಗಿ ತಿನ್ನುತ್ತಿದ್ದರು. ಹಾಗೆ ಬೆಳೆದು ದಾರಾಳವಾಗಿ ಒಂದಿಬ್ಬರಿಗೆ ಕೊಟ್ಟಾಗಲೆ ಅವರಿಗೆ ತೃಪ್ತಿ. ಪಟ್ಟಣದವರಂತೆ ಅಡ್ಜೆಸ್ಟ್‌ಮೆಂಟ್‌ನ ಜೀವನ ಅವರದ್ದಾಗಿರಲಿಲ್ಲವೆಂಬುದನ್ನು ಈ ಗಾದೆ ಮಾತು ಸ್ಪಷ್ಟಪಡಿಸುತ್ತದೆ. ದೊಡ್ಡಮನೆ ಕಾದಂಬರಿಯಲ್ಲಿ ಬಳಕೆಯಾಗಿರುವ ಕೆಲವು ಗಾದೆಗಳು ಈ ರೀತಿ ಇವೆ.

**ಬಳಕೆಯಾಗಿರುವ ಕೆಲವು ಗಾದೆಗಳು:**

- ನೆರೆಮನೆ ಬದಿಕ್ಕೆ ಹೆಗ್ಗಣ ಗುದ್ದಾಡ್ದೊ
- ಮಾತು ಆಡಿ ಕೆಡ್ತು, ಮುತ್ತು ಒಡೆದು ಕೆಡ್ತು
- ನಾಲಿಗೆ ಚೆನ್ನಾಗಿದ್ರೆ ನಾಡೆಲ್ಲಾ ಒಳ್ಳೇದು
- ಕಳ್ಳವನ ಕಣಿ ಕೇಳ್ದಂಗೆ
- ಕೋಳಿ ಹೆಚ್ಚಿ ಕೊಠಾರ ಹಾಳಾಯ್ತು
- ದಿನಾ ಸಾಯೋರಿಗೆ ಅಳೋರ್ಯಾರು
- ಒಳ್ಳೇರ ಮಾನ ಹಳ್ಳೀಲಿ ಹೋಯ್ತು

ದೊಡ್ಡಮನೆ ಕಾದಂಬರಿಯನ್ನು ಪೂರ್ತಿಯಾಗಿ ಓದಿ ಮುಗಿಸಿದ ಮೇಲೆ ಯಾರಿಗೇ ಆಗಲಿ ಅಂಥ ಮನೆಯನ್ನು ಒಡೆಯ ಬಾರದೆನ್ನುವ ಭಾವನೆ ಬರುವುದು ಸಹಜ. ಅಂಥ ಪರಿಣಾಮ ಉಂಟು ಮಾಡುವುದರಲ್ಲಿ ಕಾದಂಬರಿಕಾರರು ಯಶಸ್ವಿಯಾಗಿದ್ದಾರೆ. ದೊಡ್ಡ ಮನೆ ಲಿಂಗೇಗೌಡ ಅವರ ತಂದೆ ನಂಜೇಗೌಡರ ಬಗ್ಗೆ ಬರೆಯುವಾಗ ತುಂಬಾ ಉತ್ಸುಕರಾಗಿರುತ್ತಾರೆ. ಅನಭಿಷಕ್ತ ರಾಜರೇನೋ ಅನ್ನುವಷ್ಟು ಗೌರವದಿಂದ ಅವರನ್ನು ಆರಾಧಿಸುತ್ತಾರೆ. ದೊಡ್ಡ ಮನೆ ಪಾಲಾಗದಿರಲಿ ಎನ್ನುವುದೇ ಕಾದಂಬರಿಕಾರರ ಆಶಯ. ದೊಡ್ಡ ಮನೆ ಬಗ್ಗೆ ಎಷ್ಟೊಂದು ಭಾವುಕರಾಗಿ ಬರೆಯುತ್ತಾರೆಂದರೆ ಉದಾತ್ತ ವ್ಯಕ್ತಿತ್ವದ ಗೌಡರನ್ನು ಲೆಕ್ಕಿಸುವುದಿಲ್ಲ. ಅವರ ಮೇಲೆ ಕೊಲೆಯ ಆಪಾಧನೆ ಬಂದಾಗ ಸೂರ್ಯನ ಸುಳಿವೇ ಇರಲಿಲ್ಲ ಅವನು ಆ ಹೊತ್ತು ಕಾಣಿಸುವುದೇ ಇಲ್ಲ ಹೇಗೆ ಕಾಣಿಸಿಕೊಂಡಾನು,

ಬಾಳ ಬದುಕಿನ ದೊಡ್ಡ ಮನೆಗೆ ಈ ಕೆಟ್ಟ ಹೆಸರನ್ನು ತಂದ ಗೌಡರನ್ನು ಹೇಗೆ ನೋಡಿಯಾನು. (ಪು:೩೦೫)

ಶ್ರೀ ನಾಗೇಗೌಡರು ಬಳಸಿರುವ ಗಾದೆಗಳ ಸಂಖ್ಯೆಯನ್ನು ಗಮನಿಸಿದರೆ ಗಾದೆಗಳಿಂದಲೇ ಒಂದು ಕಾದಂಬರಿಯನ್ನು ಬರೆಯಬಲ್ಲರೇನೋ ಎನಿಸುತ್ತದೆ ಎಂಬ ಪ್ರೊ.ಹಿ.ಶಿ.ರಾಮಚಂದ್ರಗೌಡರ ಮಾತು ಸತ್ಯಕ್ಕೆ ಹತ್ತಿರವಾದುದು. ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯಲ್ಲಿ ಸುಮಾರು ೪೦ಕ್ಕೂ ಹೆಚ್ಚು ಗಾದೆಗಳು ಸಮಯೋಚಿತವಾಗಿ ಬಳಕೆಯಾಗಿದ್ದು ಕೃತಿಯ ಬೆಲೆಯನ್ನು ಹೆಚ್ಚಿಸಿವೆ. ಸೊನ್ನೆಯಿಂದ ಸೊನ್ನೆಯಲ್ಲಿ ಬಳಕೆಯಾಗಿರುವ ಕೆಲವು ಗಾದೆಗಳು ಈ ರೀತಿ ಇವೆ.

**ಕೃತಿಯಲ್ಲಿ ಬಂದಿರುವ ಗಾದೆಗಳು:**

- ರುದ್ರನಿಗಭಿಷೇಕ ವಿಷ್ಣುಗಲಂಕಾರ (ಪು-೨೧)
- ಬರೀ ಈ ಬತ್ತಿ ಭಕ್ತರ ಕೆಡಸ್ತು (ಪು-೫)
- ಕೈ ತೂಕ ಬಾಯಿ ಬಣ್ಣ (ಪು-೭೫)
- ಮಾಡಿದುಣ್ಣೋ ಮಾರಾಯ (ಪು-೩೩)
- ಸತ್ತೋನು ಸತ್ತ ಹೊತ್ತೋನು ಸತ್ತ (ಪು-೨೯)
- ನೂತರೇ ಕೇಡೇ ಮೊಬ್ಬಗಳೆ (ಪು-೧೦)
- ಬಡವನ ಹೆಂಡತಿ ಊರಿಗೆಲ್ಲಾ ಅತ್ತಿಗೆ (ಪು-೩೪)
- ನೆರೆಮನೆ ಮುದ್ದೆ ಮಾರಿಗುಡಿ ನಿದ್ದೆ (ಪು-೭೫)

ನಾಗೇಗೌಡರು ಗಾದೆಗಳ ಬಳಕೆಯಲ್ಲಿ ಎತ್ತಿದ ಕೈ, ಅವರ ಎಲ್ಲಾ ಕೃತಿಗಳಲ್ಲೂ ಗಾದೆಗಳ ಬಳಕೆ ವಿಶಿಷ್ಟವಾಗಿದೆ. ಗಾದೆ "ವಾದಕ್ಕೊಂದು ಆದಾರವನ್ನು ಮಾತಿಗೊಂದು ಮೊನಚನ್ನು ನೀಡುತ್ತದೆ" ೫೩ ಮೈಸೂರು ವೀಣೆ ಶೇಷಣ್ಣನವರನ್ನು ಸಂಗೀತ ಕಛೇರಿಗೆ ಆಹ್ವಾನಿಸಿದಾಗ ಅನಿವಾರ್ಯ ಕಾರಣಗಳಿಂದ

ಬರಲು ಸಾಧ್ಯವಿಲ್ಲವೆಂದು ಶೇಷಣ್ಣನವರಿಂದ ಪತ್ರ ಬರುತ್ತದೆ. ಆಗ ವ್ಯವಸ್ಥಾಪಕರಿಗೆ ಕೆಂಪಣ್ಣನ ನೆನಪು ಬರುವುದು ಮನೆಯಲ್ಲಿ ಬೆಣ್ಣೆ ಇಟ್ಟಿಕೊಂಡು ತುಪ್ಪಕ್ಕೆ ಅರಸಿದರಂತೆ.

ಕೆಂಪಣ್ಣನ ಹೆಂಡತಿ ಚಿನ್ನಮ್ಮ ಗಂಡನ ಪ್ರೀತಿಯ ವಿಶ್ವಾಸದಲ್ಲಿ ತನ್ನ ಮನಸ್ಸಿನಲ್ಲಿದ್ದುದನ್ನು ಹೇಳುವ ಸಂದರ್ಭ ಯಾವ ಜನ್ಮದ ಪುಣ್ಯವೋ ನಾನು ನಿಮ್ಮ ಕೈಹಿಡ್ದೆ "ಹೂವಿನಿಂದ ನಾರು ಸ್ವರ್ಗ ಸೇರುವಂತೆ" (ಪು-೯೭) ನಾಗೇಗೌಡರು ಸಂದರ್ಭಕ್ಕೆ ಹೊಂದುವಂತೆ ಗಾದೆ ಮಾತುಗಳ ಬಳಕೆ ಮಾಡುವುದರಲ್ಲಿ ನಿಸ್ಸೀಮರು.

**೨.ಪಡೆನುಡಿಗಳು – ನುಡಿಗಟ್ಟುಗಳು:-**

'ಪಡೆನುಡಿ'ಗಳನ್ನು ಜಾಣ್ನುಡಿ ಎಂದೂ ಕರೆಯುತ್ತಾರೆ. ಇವು ಜನಭಾಷೆಯ ಕೆನೆಯಂತಿರುತ್ತದೆ. ಜನರ ಅನುಭವ ಜ್ಞಾನಗಳ ರಸಘಟ್ಟಗಳಾಗಿರುತ್ತವೆ. ಹತ್ತಾರು ಪದಗಳಲ್ಲಿ ಹೇಳಬಹುದಾದ ವಿವರಣೆಯನ್ನು ಭಾವತೀವ್ರತೆಯಿಂದ ಒಂದು ಪಡೆನುಡಿ ಹೇಳುತ್ತದೆ. ಇವು ಜನತೆಯ ಮಾತಿನಲ್ಲಿರುವ ಸೌಂದರ್ಯವನ್ನು ಬಿಂಬಿಸುತ್ತದೆ. ವಿಶಿಷ್ಟ ಅರ್ಥವಂತಿಕೆಯಿಂದ ಕೂಡಿರುವ ಪಡೆನುಡಿಗಳು ನಾಗೇಗೌಡರ ಕಾದಂಬರಿಗಳಲ್ಲಿ ಹಲವಾರು ಕಾಣಸಿಗುತ್ತವೆ.

'ದೊಡ್ಡಮನೆ' ಕಾದಂಬರಿಯಲ್ಲಿ ದೊಡ್ಡಮನೆಯ ಯಜಮಾನಿ ಚಿಕ್ಕಮ್ಮ ಮರಣ ಹೊಂದಿದ ಮೇಲೆ ಗೌಡರ ಮೂರನೇ ಹೆಂಡತಿಯೂ ಮರಣ ಹೊಂದಿದಾಗ ಮನೆಯಲ್ಲಿ ಯಜಮಾನಿ ಇಲ್ಲದೆ ಹೆಂಗಸರೆಲ್ಲ ಅವರವರ ಯಜಮಾನಿಯರಾಗಲು ಪ್ರಯತ್ನಿಸುತ್ತಾರೆ. ಮನೆಯ ಪದಾರ್ಥಗಳನ್ನು ಕದ್ದು ಮುಚ್ಚಿ ಸಾಗಿಸುವುದು ಮಾಡುತ್ತಿರುತ್ತಾರೆ. ಒಂದು ದಿನ ಹೆಂಗಸರಲ್ಲಿ ಜಗಳ ಪ್ರಾರಂಭವಾಗುತ್ತದೆ. ತಲೆಗೆ ಒಂದೊಂದು ಮಾತನಾಡುತ್ತಿರುತ್ತಾರೆ, ಆಗ ಹಂಗಾಮಿ ಯಜಮಾನಿ ಎಲ್ಲರನ್ನು ಕುರಿತು "ಸುಮ್ಮನಿರ್ರೇ ಚೇಳಿಗೆ ಪಾಳುಪತ್ಯ ಕೊಟ್ಟಂಗೆ ತಲಾ ತಟ್ಟಿಗೆ ಏನು ಮಾತಾಡ್ತೀರಿ? ನೀವು ಬ್ಯಾರೇ ಇದ್ರೆ ಗೊತ್ತಾಗೋದು ಅದರ ಕಷ್ಟ" (ಪು-೨೮೧) ಎನ್ನುತ್ತಾಳೆ. ಕೆಟ್ಟವರಿಗೆ ಯಜಮಾನಿಕೆ ಕೊಟ್ಟ ಹಾಗೆ ಎಂಬ ಅರ್ಥದಲ್ಲಿ ಈ ನುಡಿಗಟ್ಟು ಬಳಕೆಯಾಗಿದೆ.

**ದೊಡ್ಡಮನೆ ಕಾದಂಬರಿಯಲ್ಲಿ ಬರುವ ಕೆಲವು ಪಡೆ ನುಡಿಗಳು:-**

| | | |
|---|---|---|
| ಸವೆದು ಸಂಕವಾಗು | – | ನವೆದು ಹೋಗುವುದು |
| ಉಚಾಯಿಸಿ | – | ಹದ್ದು ಮೀರಿ ಮಾತಾಡುವುದು |
| ಗಾಳಿಗಂಟಲು | – | ತಕರಾರು |

| | | |
|---|---|---|
| ತಲೆ ಮೇಲೆ ಕಲ್ಲೆಳೆಯುವುದು | – | ನಾಶ ಪಡಿಸುವುದು |
| ಹೆಂಚು ಇಳಕಿಸು | – | ಮನೆ ಹಾಳು ಮಾಡುವುದು |
| ಸಿಕ್ಕಿದೋರ ಸೀರುಂಡೆ | – | ದಕ್ಕಿಸಿಕೊಳ್ಳುವುದು |
| ಕಾಲುಕೆರೆಯುವುದು | – | ವಿನಾಕಾರಣ ಜಗಳಕ್ಕೆ ಬರುವುದು |
| ಹಿಟ್ಟು ದಂಡ | – | ವ್ಯರ್ಥ |

ಕಾದಂಬರಿಯಲ್ಲಿ ಅನೇಕ ಮಾರುಲಿ ಪದಗಳು ಬಳಕೆಯಾಗಿವೆ. ಈ ಪದಗಳು ಜನರ ಬಾಯಲ್ಲಿ ಅವರಿಗರಿವಿಲ್ಲದಂತೆ ಬಳಕೆಯಾಗುತ್ತದೆ. ಈ ಪದಗಳು ಜನರ ಮಾತಿನ ಧಾಟಿಯನ್ನು ಶೈಲಿಯನ್ನು ಆಡುಭಾಷೆಯಲ್ಲಿರುವ ಪ್ರಾದೇಶಿಕ ಸತ್ವವನ್ನು ತಿಳಿಸುತ್ತದೆ.

| | | |
|---|---|---|
| ಶಾಸ್ತ್ರ | – | ಗೀಸ್ತ್ರ |
| ಖೂನಿ | – | ಗೀನಿ |
| ಪಟ್ಟಿ | – | ಗಿಟ್ಟಿ |
| ಕಾಗದ | – | ಗೀಗ್ದ |
| ಸಾಲ | – | ಸೋಲ |
| ಬಟ್ಟೆ | – | ಬರೆ |

<u>ಜನಪದ ಶಬ್ದ ರೂಪಗಳು:</u>

| | | |
|---|---|---|
| ಅರೀದ | – | ಅರಿಯದ |
| ಬ್ಯಾಡಿ | – | ಬೇಡಿ |
| ಗರಡಾಳ | – | ಗರುಡ |
| ಚಮ್ಮ | – | ಚರ್ಮ |

ಬಾಳ್ಲಿ - ಬಾಳಲಿ

ಹತ್ರ - ಹತ್ತಿರ

ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯಲ್ಲಿ ಅರ್ಥವಂತಿಕೆಯಿಂದ ಕೂಡಿರುವ ಪಡೆನುಡಿಗಳೆಂದರೆ ಅರಿಶಿನ ಕುಟ್ಟು, ಒಡೆದ ಮಡಿಕೆಯಾಗು, ಉಪ್ಪು ಖಾರ ಸೇರಿಸಿ ಮಾತಾಡು, ಇವು ಬೆಳ್ಳಸಂದಿಲೇ ಹೋಗಬೇಕು. ಇವು ಮೊಳಕ್ಕೆ ನೀರ್ಗೆ ಕುಡೀಬೇಕು, ಕಣ್ಣರಿಯದಿದ್ದರೂ ಕುರುಳರಿದುದು ಕರುಬಿಟ್ಟುಕೊಳ್ಳು, ಉಂಡಿಟ್ಟು ತಿಂದ ಬದ್ನೆಕಾಯಿ, ಕುಕ್ಕೆ ಮೇಲೆ ಮೊರ ಮೊರದ ಮೇಲೆ ಕುಕ್ಕೆ, ಹಾಲಿಂದು ಉಳಕತ್ತು ನೀರಿಂದ ಹೋಯ್ತು, ಬಾಯಿಬಿಟ್ಟೆ ಬಣ್ಣಗೇಡು, ಜಾಪಾಳ ಮಾತ್ರೆ ಕೊಡು, ತರುತಳವಾಸ ಕರತಳ ಭಿಕ್ಷೆ ಇತ್ಯಾದಿ . . .

'ಅರಿಶಿನ ಕುಟ್ಟಿದ್ದರೂ ಅವರು ಕುಂಡಪ್ಪನನ್ನು ಮರೆಯುತ್ತಿರಲ್ಲ' ಎಂಬ ವಾಕ್ಯದಲ್ಲಿ ಈ ಪಡೆನುಡಿಯ ಬಳಕೆಯನ್ನು ಕಾಣಬಹುದು ಅರಿಶಿನ ಕುಡಿಯನ್ನು ಮನೆಯಲ್ಲೇ ಕುಟ್ಟಿ ಮಾಡುತ್ತಿದ್ದ ಕಾಲ ಅದು. 'ಅರಿಶಿನ ಕುಟ್ಟುವುದು' ಎಂದರೆ ಅದೊಂದು 'ಶುಭಕಾರ್ಯ' ಎಂದು ಅರ್ಥ ಅಂದರೆ ವಿಶೇಷ ನಡೆದರೂ ಆತನಿಗೆ ಆಹ್ವಾನ ಕಟ್ಟಿಟ್ಟ ಬುತ್ತಿ ಎಂಬುದು ವೇದ್ಯವಾಗುತ್ತದೆ.

'ಒಡೆದ ಮಡಕೆಯಾಗು' ಎಂದರೆ 'ಯಾವ ಉಪಯೋಗಕ್ಕೂ ಬಾರದಂತಾಗು' ಎಂದರ್ಥ. ದಾರಿ ತೋರಿಸಿದ ಮಲ್ಲೇಗೌಡರ ಮನೆಯಲ್ಲೂ ಇರದೆ ಹೇಳಿಕೆ ಮಾತು ಮತ್ತು ಹಣದಾಸೆಗಾಗಿ ಪಟೇಲರ ಮನೆಗೆ ಕೆಲಸಕ್ಕೆ ಸೇರಿದ ಚನ್ನ ಕಳ್ಳತನದ ಆರೋಪ ಹೊತ್ತು ಮನೆಯಿಂದ ಹೊರ ಬಿದ್ದಾಗ ನೊಂದು ಅಂದುಕೊಂಡ ಮಾತು 'ಒಡೆದ ಮಡಕೆಯಾದ' ಎಂಬುದು.

'ನರಂಚಿಕಡ್ಡಿ ತಕೊಂಡು ತುರುಕು (ಸಣ್ಣ ಅಂಚೀಕಡ್ಡಿ) ಬಲವಂತದಿಂದ ಊಟ ಮಾಡಿಸು' ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. ಕೆಲವರು ತಾವು ಹೇಳಿದಂತೆಯೇ ಕೇಳಬೇಕು ತಮ್ಮ ಆದೇಶವನ್ನು ಪಾಲಿಸಬೇಕು ಎಂದು ಭಾವಿಸುವವರು ಇರುತ್ತಾರೆ. ಅವರಿಗೆ ವಿರೋಧವಾಗಿ ಅದನ್ನು ವಿವರಿಸುವಾಗ ಹೇಳುವ ಮಾತು 'ಇವು ಬೆಳ್ಳ ಸಂದೀಲೆ ಹೋಗಬೇಕು ಇವು ಮೊಳಕ್ಕೆ ನೀರ್ನೆ ಕುಡೀಬೇಕು' ಎಂಬುದು.

**೩.ಜನಪದ ಗಣಿತ:-**

ಬದುಕಿನ ವ್ಯವಹಾರದ ಒಂದು ಅಂಗವಾಗಿರುವ ಲೆಕ್ಕ ಎಲ್ಲರಿಗೂ ಎಲ್ಲಾ ಕಾಲಕ್ಕೂ ಅವಶ್ಯಕ ವ್ಯವಹಾರದ ಸ್ವರೂಪವನ್ನು ತಿಳಿಸುವ ಲೆಕ್ಕಗಳು ಬರುಬರುತ್ತಾ ವಿನೋದಾಂಶವುಳ್ಳ ಚಮತ್ಕಾರಿಕೆ ರೂಪಗಳಾಗಿರುವುದನ್ನು ಕಾಣುತ್ತೇವೆ.

ಗ್ರಾಮ್ಯರಲ್ಲಿ ಎಲ್ಲರೂ ಲೆಕ್ಕಬಲ್ಲವರಾಗಿರುತ್ತಿರಲಿಲ್ಲ ದೈಹಿಕ ಶ್ರಮವನ್ನಷ್ಟೇ ನಂಬಿ ಬದುಕು ಸಾಗಿಸುತ್ತಿದ್ದ ಜನ ಬುದ್ಧಿವಂತಿಕೆಯ ಲೆಕ್ಕಚಾರಕ್ಕೆ ತಲೆ ಕೆಡಿಸಿಕೊಂಡವರಲ್ಲ ಈ ಕೃತಿಯಲ್ಲಿ ಬರುವ ಚನ್ನ ಅನುಕೂಲಸ್ಥನಾದರೂ ಚಿನ್ನ ಬೆಳ್ಳಿಗಳ ತೂಕ ಅವನಿಗೆ ತಿಳಿಯದು. ತೊಲ, ಗುಂಜಿಗಳ ಪರಿಚಯವಿರದ ಆತನಿಗೆ ಗೊತ್ತಿದ್ದುದು ಸೇರು, ಕೊಳಗ, ಮಣ ಇಷ್ಟೇ 'ಅವನು ಜೀವಮಾನದಲ್ಲಿ ನೂರೈವತ್ತು' ಎಂಬ ರೂಪಾಯಿಯನ್ನು ನೋಡಿದ್ದುದು ಹೋಗಲಿ 'ನೂರೈವತ್ತು' ಎಂಬ ಅಂಕಿಯನ್ನು ಕೇಳಿರಲಿಲ್ಲ. ಇಪ್ಪತ್ತರ ಮೇಲೆ ಯಾವತ್ತೂ ದುಡ್ಡು ಲೆಕ್ಕ ಹಾಕಿರಲಿಲ್ಲ ನಲವತ್ತು ಎನ್ನುವುದಕ್ಕೆ ಎರಡಿಪ್ಪತ್ತು ಎನ್ನುತ್ತಿದ್ದ, ಅವನ ಹೆಂಡತಿ ಚೌಡಿಯೂ ಒಂದಿಪ್ಪತ್ತು, ಎರಡಿಪ್ಪತ್ತು, ಮೂರಿಪ್ಪತ್ತು, ನಾಲ್ಕಿಪ್ಪತ್ತು, ಎಂದು ಎಣಿಸಿ ಹೊಸ ಗಣಿತ ಶಾಸ್ತ್ರಜ್ಞೆಯಾಗಿದ್ದಳು ಎಂಬುದನ್ನು ಗಮನಿಸಿದರೆ ಗೊತ್ತಿರುವ ಒಂದು ಅಂಕಿಯನ್ನೇ ಇಮ್ಮಡಿ, ಮುಮ್ಮಡಿ ಮಾಡುತ್ತಾ ತಮ್ಮ ಸಿರಿವಂತಿಕೆ ತಿಳಿಯುತ್ತಿದ್ದ ಅಥವಾ ಅಳೆಯುತ್ತಿದ್ದ ಕಾಲವದು. ಹೀಗೆ ಅಷ್ಟಾಗಿ ತಿಳಿಯದ ಗಣಿತ ಜಾನಪದರ ಕಲ್ಪನೆಗೆ ಅನುಗುಣವಾಗಿ ಬಿಡಿಸಲ್ಪಡುತ್ತಿತ್ತು. ಇದರಿಂದ ಅವರ ಲೆಕ್ಕಜ್ಞಾನದ ಬಗೆಗಿನ ಮುಗ್ಧತೆ ಎಷ್ಟಿತ್ತು ಎಂಬುದನ್ನು ಅರಿಯಬಹುದು.

**೪.ಬೈಗುಳಗಳು:**

ಮನುಷ್ಯನ ಮಾನಸಿಕ ಉದ್ವಿಗ್ನತೆ, ಕೋಪ, ಅಸಹಾಯಕತೆ, ಕೀಳಿರಿಮೆ, ಮೇಲಿರಿಮೆ, ಶಾಬ್ದಿಕ ದಬ್ಬಾಳಿಕೆ ಮಾತಿನಿಂದ ವ್ಯಕ್ತವಾದರೆ ಅದು 'ಬೈಗುಳ' ಎನಿಸಿಕೊಳ್ಳುತ್ತದೆ. ಇವು ತಲೆಮಾರಿನಿಂದ ತಲೆಮಾರಿಗೆ ವಾಕ್ಪರಂಪರೆಯಿಂದ ಸಾಗಿ ಬರುತ್ತದೆ. ಮಾತಿನ ನಡುವೆ ಕಂಡು ಬರುವ ಇವು ಕೆಲವು ಬಾರಿ ಕಾವ್ಯ ಮಯವಾಗಿರುತ್ತವೆ. ಕಣ್ಣಿಗೆ ಕಟ್ಟುವ ಅನೇಕ ಭಯಂಕರ ಚಿತ್ರಗಳನ್ನು ಸೃಷ್ಟಿಸುವ ಇವುಗಳಿಂದ ಅಥವಾ ಇವುಗಳ ಪ್ರಯೋಗದಿಂದ ಬಯ್ಯುವವನ ಕೋಪತಾಪ ತಾತ್ಕಾಲಿಕವಾಗಿಯಾದರೂ ಶಮನವಾಗುತ್ತದೆ. ಸ್ನೇಹಿತರ ನಡುವೆ ಪ್ರೀತಿ, ತಮಾಷೆಗಾಗಿ ಬೈಯ್ಯುವ ಬೈಗುಳ ತಪ್ಪು ಮಾಡಿದಾಗ ಬೈಯ್ಯುವ ಬೈಗುಳಗಳೂ ಇವೆ.

ಬೈಗುಳಗಳು ಪಂಪ, ಕುಮಾರವ್ಯಾಸ, ಅಂಬಿಗರ ಚೌಡಯ್ಯ, ಮೊದಲಾದವರ ಕೃತಿಗಳಲ್ಲಿ ಅಧಿಕವಾಗಿ ಬಳಸಲ್ಪಟ್ಟಿವೆ ಬೈಗುಳಗಳೇ · ಹೆಂಗಸರಿಗೆ ಜಗಳದಲ್ಲಿ ಆಯುಧಗಳು ಹಲವು ಸಂದರ್ಭಗಳಲ್ಲಿ ಸುಂದರ ರೂಪಕಗಳಾಗಿರುವ ಇವು ಹಿಂದಿನ ಕಾಲದ ಪದ್ಧತಿ, ನಂಬಿಕೆ, ಶಿಕ್ಷೆ, ಸಾಮಾಜಿಕ ನಡವಳಿಕೆಗಳನ್ನು ಪ್ರತಿ ಬಿಂಬಿಸುತ್ತವೆ. ಸ್ವಾರಸ್ಯಕರವಾದ ಸಂಗತಿ ಎಂದರೆ ಪ್ರಸ್ತುತ 'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿಯ ಉಗಮಕ್ಕೆ ಒಂದು ಬೈಗುಳ ಕಾರಣವಾಗಿರುವುದು "ಬಯಲು ಸೀಮೆಯ ಗ್ರಾಮಾಂತರ ಪ್ರದೇಶದಲ್ಲಿ ಯಾರನ್ನಾದರೂ ಬೈಯಬೇಕಾದಂ" ನಿನ್ನ ಮನೆ ದೂಪದ ಚನ್ನನ ಮನೆಯಂಗೆ ಗುಡಿಸಿ ಗುಂಡಾಂತರಾಗ" ಎಂಬ ಮಾತನ್ನು ಬಳಸಿ ಬಯ್ಯುತ್ತಾರೆ ಶ್ರೀ ಕೆ.ಸಿ.ವೀರೇಗೌಡ ಎಂಬುವರು ಲೇಖಕರಿಗೆ ಹೇಳಿದ ಕತೆ ದೂಪದ ಚನ್ನನ ಕಥೆಯನ್ನೇ

ಹೋಲುತ್ತಿದುದರಿಂದ ಆತನೊಬ್ಬ ಐತಿಹಾಸಿಕ ವ್ಯಕ್ತಿಯಾಗಿರಬೇಕೆಂದು ಆ ಬೈಗುಳವನ್ನು ಸಂಶೋಧನೆ ಮಾಡಿದಾಗ ನಾಗೇಗೌಡರಿಗೆ ಈ ಕಥೆ ಹಾಗೂ ಗಾದೆಯ ಬಗೆಗೆ ಮಾಹಿತಿ ದೊರೆತಿದೆ.

'ಅವರ ಮನೆ ಮಂಡೆ ಮಾಸ್ಹೋಗ'

'ದ್ಯಾವರ ಗಂಟು ತಿಂದೋನ ಮನೆ ಎಕ್ಕುಟ್ಹೋಗ್ಲಿ ಅವರ ಮನೆ ಹಾಳಾಗೋಗ್ಲಿ' (ಪು-೨೮)

'ನನ್ನಾಟಕಳ್ಳ' (ಪು-೭೧)

'ಇವನ ವಂಶ ಹಾಳಾಗ'

'ದೇವರ ಗಂಟು ತಿಂದೋರ್ಮನೆ ಗುಡಿಸಿ ಗುಂಡಾಂತರಾಗ್ಲಿ' (ಪು-೧೭೩)

'ಅದ್ನೋ ವಂಶ್ಹಾಳಾ' (ಪು-೧೯೪)

'ನಿನ್ನ ಮಗನ್ನ ತಿನ್ನ ನಿನ್ನ ಹೆಂಡತಿ ತಿನ್ನ' (ಪು-೨೦೧)

'ದ್ಯಾವರ ಗಂಟು ತಿಂದೋನ ಮನೆ ಎಕ್ಕುಟ್ಹೋಗ್ಲಿ, ಅವರ ಮನೆ ಹಾಳಾಗೋಗ್ಲಿ'

ದೇವಸ್ಥಾನದ ಜೀರ್ಣೋದ್ಧಾರಕ್ಕೆಂದು ಸಂಗ್ರಹಿಸಿ ಜೋಪಾನವಾಗಿಡಲು ಕೊಟ್ಟಿದ್ದ ಹಣವನ್ನು ಚನ್ನಯ್ಯನು ಯಾವುದೇ ತೊಕ್ಕು ಕೊಡದೆ ಲಪಟಾಯಿಸಿದ್ದಕ್ಕೆ ಊರ ಜನ ಅವನಿಗೆ ಶಾಪ ಹಾಕಿ, ಬೈದ, ಬೈಗುಳ ಇದು.

# ಅಧ್ಯಾಯ – ೯

# ಉಪಸಂಹಾರ

ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯ ಕ್ಷೇತ್ರದಲ್ಲಿ ಗಣನೀಯ ಸಾಧನೆ ತೋರಿರುವ ಶ್ರೀ ಹೆಚ್.ಎಲ್.ನಾಗೇಗೌಡರ ಕಾದಂಬರಿಗಳು ಜೀವಂತಿಕೆಯನ್ನು ಮಿಡಿಯುವ ಜೀವನ ಚಿತ್ರಗಳ ನಿರೂಪಣೆಯನ್ನು ಒಳಗೊಂಡಿವೆ. ಇವರ ಕಾದಂಬರಿಗಳಲ್ಲಿ ಪರಿಪಕ್ವ ಗ್ರಾಮೀಣ ಜೀವನ, ಅದರ ಹಿಂದೆ ಅಡಗಿರುವ ಸಂಸ್ಕೃತಿಯ ಚಿತ್ರಗಳು ಪುಟಪುಟಕ್ಕೂ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಬಯಲು ಸೀಮೆಯ ಹಳ್ಳಿಯ ಬಾಳಿನ ಚಿತ್ರವನ್ನು ಇವರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

ನಾಗೇಗೌಡರ ದೊಡ್ಡಮನೆ ಕಾದಂಬರಿಯು ಒಂದು ಸಂಕೀರ್ಣ ವಿಶಿಷ್ಟ ಅನುಭವವನ್ನು ನೀಡುತ್ತದೆ. ಕಣ್ಮರೆಯಾಗುತ್ತಿರುವ, ಕಿವಿಮರೆಯಾಗುತ್ತಿರುವ ಒಂದು ಜೀವನ ವಿಧಾನವನ್ನು ಚಿತ್ರಿಸುವಲ್ಲಿ ಈ ಕಾದಂಬರಿ ಯಶಸ್ವಿಯಾಗಿದೆ ಎಂದು ಅಭಿಪ್ರಾಯಪಡಬಹುದು. ಎಷ್ಟೋ ಜನಕ್ಕೆ ಗೊತ್ತಿಲ್ಲದ ಜೀವನ ವಿಧಾನ ಈ ಕಾದಂಬರಿಯಲ್ಲಿ ಕಣ್ಣಿಗೆ ಕಟ್ಟುವಂತೆ ಮನಸ್ಸಿಗೆ, ಹೃದಯಕ್ಕೆ ಮುಟ್ಟುವಂತೆ ಜೀವಂತವಾಗಿ ಚಿತ್ರಣಗೊಂಡಿವೆ. ಇದೇ ದಿಶೆಯಲ್ಲಿ ದೊಡ್ಡಮನೆ ಪ್ರಾದೇಶಿಕ ಕಾದಂಬರಿಯಾಗಿ ಓದುಗರನ್ನು ಸೆರೆಹಿಡಿಯುವಲ್ಲಿ ಸಮರ್ಥವಾಗಿದ್ದು. ಕುವೆಂಪು ರವರ ಕಾನೂನು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು, ರಾವಬಹದ್ದೂರರ ಗ್ರಾಮಾಯಣ, ಮಿರ್ಜಿ ಅಣ್ಣಾರಾಯರ ನಿಸರ್ಗ ಕಾದಂಬರಿಗಳ ಸಾಲಿಗೆ ನಿಲ್ಲುತ್ತದೆ ಎನ್ನಬಹುದು.

ನಾಗೇಗೌಡರ ಎರಡನೇಯ ಕಾದಂಬರಿಯಾದ 'ಸೊನ್ನೆಯಿಂದ ಸೊನ್ನೆಗೆ' ಸಣ್ಣ ಪ್ರಮಾಣದ ಪ್ರಾದೇಶಿಕ ಸತ್ವವುಳ್ಳ ಕಾದಂಬರಿಯಾಗಿದೆ. ಈ ಕಾದಂಬರಿಯು ನಮ್ಮ ಬಯಲು ನಾಡಿನ ಗ್ರಾಮ ವಾಸಿಗಳ ಜನಜೀವನದ ನೈಜಚಿತ್ರ ಇದರಲ್ಲಿ ಬಹಳ ಚೆನ್ನಾಗಿ ಮೂಡಿ ಬಂದಿದೆ. ಮೂರು ತಲೆಮಾರಿನ ಚಿತ್ರಣ ಕಾದಂಬರಿಯಲ್ಲಿ ಹರಡಿಕೊಂಡಿದೆ. ಗ್ರಾಮೀಣ ಬದುಕನ್ನು, ಬಯಲುಸೀಮೆಯ ಪರಿಸರವನ್ನು ಸ್ಪಷ್ಟವಾಗಿ, ವಾಸ್ತವವಾಗಿ ಪ್ರತಿಬಿಂಬಿಸುವಲ್ಲಿ ಈ ಕಾದಂಬರಿಯು ಯಶಸ್ವಿಯಾಗಿದೆ ಎನ್ನಬಹುದು. ಸುಮಾರು ನೂರು ವರ್ಷಗಳ ಹಿಂದಿನ ಹಳ್ಳಿಗಳ ವಾಸ್ತವಿಕ ಚಿತ್ರಣವನ್ನು ಈ ಕಾದಂಬರಿಯಲ್ಲಿ ಕಾಣಬಹುದು. ಜನಪದ ಇದರ ವಸ್ತುವಾಗಿರುವುದರಿಂದ ಕಾದಂಬರಿಕಾರರ ಭಾಷೆ ಸಹಜವಾಗಿ ಹೊಂದಿಕೊಂಡಿದೆ. ಗಾದೆಗಳ ಬಳಕೆ ಔಚಿತ್ಯವರಿತು ಸಾಗಿದೆ. ಗಾದೆ ನುಡಿಗಟ್ಟುಗಳಿಂದ ಕೂಡಿದ ಈ ಭಾಷೆ ದಟ್ಟವಾದುದು, ಸಹಜವಾದುದು ಆಗಿದೆ. ನಾಗೇಗೌಡರು ಕಲಾತ್ಮಕ ನಿಷ್ಠೆಯಿಂದ,

ತಲ್ಲೀನತೆಯಿಂದ ಅನ್ಯರ, ಅನುಭವವೂ ಸ್ವಾನುಭವಪ್ರಾಯವಗಿದೆ. ಸ್ವಂತ ಕಲ್ಪನೆಯಿಂದ ಅನ್ಯರ ಅನುಭವವನ್ನು ಬೆಳಗಿಸಿ ನಿರೂಪಣೆ ಮಾಡಿ ಯಶಸ್ವಿಯಾಗಿದ್ದಾರೆ ಎನ್ನಬಹುದು.

ನಾಗೇಗೌಡರು 'ಭೂಮಿಗೆ ಬಂದ ಗಂಧರ್ವ' ಕಾದಂಬರಿಯೂ ಒಬ್ಬ ಮಹಾಕಲೋಪಾಷಕರ ಒಬ್ಬ ಶ್ರೇಷ್ಠ ವಿದ್ವಾಂಸರ, ಗಾನಗಂಧರ್ವರ ಜೀವನ ಚರಿತ್ರೆಯನ್ನು ಅತ್ಯಂತ ಸುಂದರವಾಗಿ, ಆಕರ್ಷಕವಾಗಿ ಚಿತ್ರಿಸಿದೆ. ಕಾದಂಬರಿಯ ಭಾಷೆ ಮತ್ತು ಶೈಲಿ, ಬಹುಶುದ್ಧ, ಅತಿ ಸರಳವಾಗಿ ವಿಷಯ ನಿರೂಪಣೆ ಬಹು ಅಚ್ಚುಕಟ್ಟಾಗಿ ಮೂಡಿ ಬಂದಿದೆ. ಜಾತಿ ಮತಾಂಧರ ಆವಜ್ಞೆಯಿಂದಾಗಿ ಇತಿಹಾಸದ ತಿಪ್ಪೆಗುಂಡಿ ಸೇರಿಹೋಗಿ ಬಿಡುತ್ತಿದ್ದ ಒಂದು ದೊಡ್ಡ ನಷ್ಟವನ್ನು ಕಾದಂಬರಿಕಾರರಾದ ನಾಗೇಗೌಡರು ತಪ್ಪಿಸಿ ಚಿರಂತನ ಸ್ಮರಣೀಯ ಸಾಂಸ್ಕೃತಿಕ ದಾಖಲೆಯಾಗಿ ಮಾಡಿದ್ದಾರೆ ಎನ್ನಬಹುದು.

ಸಂಗೀತ ಸಾಮ್ರಾಟ್ ಬೈರವಿ ಕೆಂಚೇಗೌಡರ ಸಾಧನೆ ಸಿದ್ದಿಗಳನ್ನು ದೊರೆತ ಮಾಹಿತಿಗಳ ಆಧಾರದ ಮೇಲೆ ಪರಕಾಯ ಪ್ರವೇಶಿಸಿ ತಮ್ಮ ಕಲ್ಪನಾ ಪ್ರತಿಭೆಯಿಂದ ಅದ್ಭುತವಾಗಿ ಚಿತ್ರಿಸಿದ್ದಾರೆ. ಕಾದಂಬರಿಯಲ್ಲಿ ಹತ್ತೊಂಭತ್ತು ಮತ್ತು ಇಪ್ಪತ್ತನೆಯ ಶತಮಾನದ ಹಲವಾರು ಸಂಗೀತ ಮಹಾ ಪುರುಷರ ವ್ಯಕ್ತಿ ಚಿತ್ರಣಗಳನ್ನು ಲೇಖಕರು ಸ್ವಾರಸ್ಯವಾಗಿ ತಂದಿದ್ದಾರೆ. ಕೆಂಪೇಗೌಡರ ಜೀವನ, ಅವರ ನಾನಾ ರಾಗಗಳ ಇಂಪು ಪೆಂಪು ಕಾದಂಬರಿಯಲ್ಲಿ ಓದುಗರ ಮನಮುಟ್ಟುವಂತೆ ಕಾವ್ಯಮಯವಾದ ಶೈಲಿಯಲ್ಲಿ ಬಣ್ಣಿತವಾಗಿದೆ. ಕಾದಂಬರಿ ಯಾವ ಭಾಗದಲ್ಲೂ ನೀರಸವಾಗಿಲ್ಲ ಎಂದು ಅಭಿಪ್ರಾಯಪಡಬಹುದು.

ನಾಗೇಗೌಡರ ದೊಡ್ಡಮನೆ, ಸೊನ್ನೆಯಿಂದ ಸೊನ್ನೆಗೆ, ಭೂಮಿಗೆ ಬಂದ ಗಾಂಧರ್ವ, ಕಾದಂಬರಿಗಳು ಪ್ರಾದೇಶಿಕತೆಯನ್ನು ಅತ್ಯಂತ ದಟ್ಟವಾಗಿ ಪ್ರತಿನಿಧಿಸುವ ಕಾದಂಬರಿಗಳೆಂದು ಹೇಳಬಹುದು. ಈ ಕಾದಂಬರಿಗಳು ಒಂದು ಗ್ರಾಮದಲ್ಲಿ ವಾಸವಾಗಿರುವ ವಿವಿಧ ವೃತ್ತಿಗಳ, ವಿವಿಧ ರೀತಿಯ ಮನೋಭಾವದ ಜನಗಳ ವಿವಿಧ ಆಚರಣೆಗಳ, ನಂಬಿಕೆಗಳ, ಸಂಪ್ರದಾಯಗಳ, ವೇಷ ಭೂಷಣಗಳ, ಭಾಷೆಯ ಸ್ಥೂಲವಾದ ಚಿತ್ರವನ್ನು ಕೊಡುವಲ್ಲಿ ಸಫಲಕಾರಿಯಾಗಿದೆ. 'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿ ಪ್ರಾದೇಶಿಕತೆಯ ಎಲ್ಲ ಲಕ್ಷಣಗಳನ್ನು ಮೈಗೂಡಿಸಿಕೊಂಡು ಅವತರಿಸಿದೆ, ದೊಡ್ಡಮನೆ ಕಾದಂಬರಿಯ ಅಭ್ಯಾಸದಿಂದ ಒಂದು ಗಾದೆಯ ಕೋಶವನ್ನು ನಿರ್ಮಿಸಬಹುದಾದರೆ, ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯ ಅವಲೋಕನದಿಂದ ಒಂದು ಅರ್ಥಕೋಶವನ್ನು ತೆರೆಯುವ ಸಾಧ್ಯತೆಯಿದೆ. ಬಯಲುಸೀಮೆಯ ಪದಗಳು, ನುಡಿಗಟ್ಟುಗಳು ಇವರ ಕಾದಂಬರಿಯಲ್ಲಿ ದೊರಕುತ್ತವೆ. ನಾಗೇಗೌಡರ ಕಾದಂಬರಿಗಳಲ್ಲಿ ಆಡು ಮಾತುಗಳಿಗೂ ಜನ ಜೀವನಕ್ಕೂ ಅರ್ಥಪೂರ್ಣವಾದ ಸಂಬಂಧವೇರ್ಪಡುವುದರಿಂದ ಗ್ರಾಮೀಣ ಭಾಷೆಯ ಸತ್ವವನ್ನು ಮಣ್ಣಿನ ಗುಣವನ್ನು ಉಳಿಸಿಕೊಳ್ಳುವಲ್ಲಿ ಸಾಧ್ಯವಾಗಿದೆ. "ಗ್ರಾಮೀಣ ಬಾಳನ್ನು ಕುರಿತು ಕಾದಂಬರಿ ಬರೆಯುವುದು ಸುಲಭವಲ್ಲ, ಅದನ್ನು

ಬರೆದವರಿಗೇ ಆ ಕಷ್ಟ ಗೊತ್ತು" ಎಂಬ ನಾಗೇಗೌಡರ ಮಾತು ಅವರ ಕಾದಂಬರಿಗಳ ವೈಶಿಷ್ಟತೆಯನ್ನು ಹೆಚ್ಚಿಸಿದೆ. ಒಟ್ಟಿನಲ್ಲಿ ಅವರ ಕಾದಂಬರಿಗಳು ಗ್ರಾಮೀಣ ಬಾಳಿನ ಪರಿಪೂರ್ಣ ಚಿತ್ರವನ್ನು ನೀಡುವಲ್ಲಿ ಯಶಸ್ವಿಯಾಗಿವೆ ಎನ್ನಬಹುದು.

ಕಾದಂಬರಿಗಳಲ್ಲಿ ಬರುವ ಪಾತ್ರ ಚಿತ್ರಣ ಸಹೃದಯರ ಮನದಲ್ಲಿ ನೆಲೆಯೂರಿ ಗ್ರಾಮ್ಯತೆಯ ಪರಿಪೂರ್ಣತೆಗೆ ಪೂರಕವಾಗಿವೆ. ಬಯಲುಸೀಮೆಯ ಆಹಾರ ಪದ್ಧತಿ, ಜನರ ಕೃಷಿ, ಕೃಷಿ ಸಲಕರಣೆಗಳು, ಕಾದಂಬರಿಯಲ್ಲಿ ಚಿತ್ರಣಗೊಂಡಿದ್ದು ನಮ್ಮ ಜಾನಪದೀಯ ಜ್ಞಾನವನ್ನು ಹೆಚ್ಚಿಸುತ್ತವೆ. ಪ್ರಾದೇಶಿಕ ಭಾಷೆಯ ಬಳಕೆ, ಶೈಲಿ, ಕಾದಂಬರಿಕಾರರು ಕೊಡುವ ಉಪಮೆಗಳು, ಕಾದಂಬರಿಗೆ ಪೂರಕವಾಗಿ ಮೂಡಿ ಬಂದಿದೆ.

ಇಂದಿನ ಸಂದರ್ಭದಲ್ಲಿ ಪ್ರಾದೇಶಿಕತೆಯ, ಐತಿಹಾಸಿಕ ನಂಬಿಕೆ, ಶ್ರದ್ದೆಗಳನ್ನು ಗುರುತಿಸುವ ಮತ್ತು ದಾಖಲಿಸುವ ಕೆಲಸ ಆಗಬೇಕಾಗಿದೆ. ಗ್ರಾಮೀಣರ ಭಾಷಾವೈಶಿಷ್ಟ್ಯವನ್ನು ಶಬ್ಧಕೋಶದ ಮೂಲಕ ಅರಿಯುವ, ಅವರ ಸಾಧನ ಸಲಕರಣೆಗಳನ್ನು ಚಿತ್ರ ಮತ್ತು ವಸ್ತು ಸಂಗ್ರಹಾಲಯಗಳಲ್ಲಿ ಕಾಣುವ ಸ್ಥಿತಿಯಲ್ಲಿ ನಾಗೇಗೌಡರ ಕಾದಂಬರಿಗಳು ಬಯಲುಸೀಮೆಯ ಗ್ರಾಮೀಣ ಬದುಕನ್ನು ಪ್ರಾದೇಶಿಕ ವೈಶಿಷ್ಟ್ಯತೆಯನ್ನು ತೆರೆದಿಡುವ ಪ್ರಯತ್ನವನ್ನು ಮಾಡಿವೆ ಎನ್ನಬಹುದು.

## ಪರಾಮರ್ಶನ ಗ್ರಂಥಗಳು:

೧. 'ದೊಡ್ಡಮನೆ' – ಐ.ಬಿ.ಹೆಚ್.ಪ್ರಕಾಶನ, ಆರನೇ ಮುದ್ರಣ. ೨೦೧೧

೨. 'ಸೊನ್ನೆಯಿಂದ ಸೊನ್ನೆಗೆ' – ಸಾಹಿತ್ಯ ಸದನ ಪ್ರಕಾಶನ, ಎರಡನೇ ಮುದ್ರಣ. ೧೯೭೮

೩. 'ಭೂಮಿಗೆ ಬಂದ ಗಂಧರ್ವ' – ಸಾಹಿತ್ಯ ಸದನ ಪ್ರಕಾಶನ, ಎರಡನೇ ಮುದ್ರಣ. ೧೯೭೮

೪. 'ನಾಗವಲ್ಲಿ' – ಸಂಪಾದಕರು – ಜೀ.ಸಂ.ಪ, ಹ.ಕ.ರಾಜೇಗೌಡ, ಪ್ರದಾನ ಗುರುದತ್ತ ಸನ್ಮಾನ ಸಮಿತಿ, ಚಾಮರಾಜಪೇಟೆ, ಬೆಂಗಳೂರು, ಪ್ರಥಮ ಮುದ್ರಣ. ೧೯೭೯

೫. 'ನಾಗ ಸಂಪದ' – ಸಂಪಾದಕ, ಡಾ|| ಚಕ್ಕೆರೆ ಶಿವಶಂಕರ್, ಕರ್ನಾಟಕ ಜಾನಪದ ಪರಿಷತ್ತು, ೨೦೦೧

೬. ಸಾಹಿತ್ಯ ವಿಮರ್ಶೆಯ ಮೂಲ ತತ್ವಗಳು – ಹೆಚ್.ತಿಪ್ಪೆರುದ್ರಸ್ವಾಮಿ, ಪ್ರಸಾರಾಂಗ, ಮೈಸೂರು

೭. 'ಜೀವನಯಾತ್ರೆ ಭಾಗ–೧ – ಎಚ್.ಎಲ್.ನಾಗೇಗೌಡ, ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು. ೧೯೯೫

೮. ಜೀವನಯಾತ್ರೆ ಪೂರ್ವೋಕ್ತ – ಎಚ್.ಎಲ್.ನಾಗೇಗೌಡ

೯. ಸಾಲುದೀಪಗಳು – ಸಂಪಾದಕ– ಜಿ.ಎಸ್. ಸಿದ್ದಲಿಂಗಯ್ಯ ಮತ್ತು ಎಂ.ಎಚ್.ಕೃಷ್ಣಯ್ಯ, ಡಾ.ಚಕ್ಕೆರೆ ಶಿವಶಂಕರ್ ಅವರ ಲೇಖನ.

೧೦. ವಿಮರ್ಶೆಯ ಸ್ವರೂಪ – ಮಿರ್ಜಿ ಅಣ್ಣರಾಯ, ಸಾಹಿತ್ಯ ಭಂಡಾರ, ಹುಬ್ಬಳ್ಳಿ ೧೯೫೯

೧೧. "ಜಿ.ಎಸ್.ಅಮೂರ ಕಾದಂಬರಿಗಳ ವಿಮರ್ಶೆ" – ವಿಚಾರ ಗೋಷ್ಠಿಯ ಅಧ್ಯಕ್ಷರ ಭಾಷಣ, ಕಾದಂಬರಿಕಾರರಾಗಿ ಕಾರಂತ, ಸಂಪಾದಕ – ಜಿ.ಎಸ್. ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೮೩

೧೨. 'ನಮ್ಮ ಸುತ್ತಿನ ಗಾದೆಗಳು' - ಸಂಪಾದಕ - ಸುಧಾಕರ, ಪ್ರತಿಭಾ ಪ್ರಕಾಶನ, ಮೈಸೂರು, ಎರಡನೇ ಮುದ್ರಣ. ೧೯೮೯

೧೩. 'ಗಾದೆಗಳ ಸಾಹಿತ್ಯ' ಸಾಹಿತ್ಯ ಸಲ್ಲಾಪ - ಹಾ.ಮಾ. ನಾಯಕ, ಲೇಖನ, ಸುರುಚಿ ಪ್ರಕಾಶನ, ಮೈಸೂರು. ೧೯೭೦

೧೪. ನನ್ನೂರು - ಎಚ್.ಎಲ್. ನಾಗೇಗೌಡ

೧೫. ಜಾನಪದ ಸ್ವರೂಪ - ಹಾ.ಮಾ. ನಾಯಕ ೧೯೭೧

೧೬. ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ - ವಿವಿಧ ಲೇಖಕರು - ಪ್ರಧಾನ ಸಂಪಾದಕರು - ಬರಗೂರು ರಾಮಚಂದ್ರಪ್ಪ

೧೭. ಕನ್ನಡ ಜಾನಪದ ಕೋಶ - ಪ್ರದಾನ ಸಂಪಾದಕರು - ಡಾ॥ ಎಚ್.ಎಲ್. ನಾಗೇಗೌಡ, ಮೊದಲ ಮುದ್ರಣ, ೧೯೯೮, ಪ್ರಕಾಶಕರು, ಕರ್ನಾಟಕ ಜಾನಪದ ಪರಿಷತ್ತು.